# ಸಿದ್ಧಗಂಗಾ



ಶ್ರೀ ಕ್ಷೇತ್ರದಲ್ಲಿರುವ ಲಿಂಗೈಕ್ಯ ಶ್ರೀ ಶ್ರೀ ಉದ್ದಾನಶಿವಯೋಗಿಗಳವರ ಗದ್ದುಗೆ.

ಜುಲೈ 1981

## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

840 ಶ್ರೀ ಎಸ್. ಮಹಾಲಿಂಗಪ್ಪ
ಸಿಲ್ಕ್ ಪ್ರಡ್ಯೂಸರ್,
ವಿಜಯಪುರ,
ಬೆಂಗಳೂರು ಜಿಲ್ಲೆ.

841 ಶ್ರೀ ಸಿ. ವಿ. ಶ್ರೀನಿವಾಸಪ್ಪ,
ಕೆ. ಇ. ಬಿ.
ಸಿಡ್ಲಘಟ್ಟ,
ಕೋಲಾರ ಜಿಲ್ಲೆ.

842 ಶ್ರೀ ಐ. ಎನ್. ದೇವರಾಜು
ಕಾಫಿಪ್ಲಾಂಟರ್,
ಐಗೂರು
ಹಾಸನ ಜಿಲ್ಲೆ.

843 ಶ್ರೀ ಜಿ. ಎಂ. ಬಸವಲಿಂಗಪ್ಪ
ಗಿರಿಯಾಪುರ,
ಕಡೂರು ತಾ॥
ಚಿಕ್ಕಮಂಗಳೂರು ಜಿಲ್ಲೆ.

844 ಶ್ರೀ ಎಸ್.ಜಿ. ಪುಟ್ಟರಾಜಣ್ಣ
ಶಿಕ್ಷಕರು,
ದೇವನಹಳ್ಳಿ,
ಬೆಂಗಳೂರು ಜಿಲ್ಲೆ.

845 ಶ್ರೀ ಹೆಚ್.ಬಿ. ಚನ್ನಬಸಪ್ಪ,
ಮರ್ಚೆಂಟ್, ತುಂಬಸೋಗೆ,
ಹೆಗ್ಗಡದೇವನಕೋಟೆ ತಾ॥
ಮೈಸೂರು ಜಿಲ್ಲೆ.

846 ಶ್ರೀಮತಿ ಎ.ಎಂ. ಸಿದ್ಧಲಿಂಗಮ
W/o ಶ್ರೀ ಎ.ಆರ್. ರಾಜಣ್ಣ
ಮರ್ಚೆಂಟ್, ಅರೆಹಳ್ಳಿ,
ಕಾಡುಗೋಡಿ,
ಬೆಂಗಳೂರು ಜಿಲ್ಲೆ.

847 ಶ್ರೀ ಹೆಚ್.ಎಸ್. ನಂಜುಂಡಯ್ಯ
ಹುಲಿಹಳ್ಳಿ
ತಿಪಟೂರು ತಾ॥
ತುಮಕೂರು ಜಿಲ್ಲೆ.

848 ಸಿದ್ಧಗಂಗಾ ಟೀಚರ್ಸ್
ಟ್ರೈನಿಂಗ್ ಕಾಲೇಜ್,
ತುಮಕೂರು-2

849 ಶ್ರೀ ಮರುಳಸಿದ್ದಯ್ಯ
ಮುಖ್ಯ ಶಿಕ್ಷಕರು
ಚಿಕ್ಕನಾಯಕನಹಳ್ಳಿ,
ತುಮಕೂರು ಜಿಲ್ಲೆ.

# ಸಿದ್ಧಗಂಗಾ

ಸಂಪುಟ–೧೭ ಸಂಚಿಕೆ - ೭ ಜುಲೈ, ೧೯೮೧

**ಭವಾಂಬೋಧಿನಾವಂ ಸದಾಶುದ್ಧಭಾವಂ**
**ಶಿವಂ ಶಾಂತಮೇಕಂ ಪರಿತ್ರಾತಲೋಕಂ ।**
**ಶಿವಾನಂದಲಿಂಗಂ ಶಿವಾದ್ವೈತಲಿಂಗಂ**
**ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥**

  

ಲಿಂಗದಿಂದುದಿಸಿ ಅಂಗವಿಡಿದಿಪ್ಪ ಪುರಾತನರ
ಇಂಗಿತವೇನೆಂದು ಬೆಸಗೊಂಬಿರಯ್ಯ ?
ಅವರ ನಡೆಯೇ ಆಗಮ, ಅವರ ನುಡಿಯೇ ವೇದ,
ಅವರ ಲೋಕದ ಮಾನವರೆಂದೆನ್ನಬಹುದೆ ಅಯ್ಯಾ ?
ಅದೆಂತೆಂದಡೆ ಸಾಕ್ಷಿ ;
"ವೃಕ್ಷಾದ್ಭವತಿ ಬೀಜಂ ಹಿ ತದ್ ವೃಕ್ಷೇ ಲೀಯತೇ ಪುನಃ
ರುದ್ರಲೋಕಂ ಪರಿತ್ಯಕ್ತ್ವಾ ಶಿವಲೋಕೇ ಭವಿಷ್ಯತಿ" ಎಂಬುದಾಗಿ
ಅಂಕೋಲೆಯ ಬೀಜದಿಂದಾಯಿತ್ತು ವೃಕ್ಷವು
ಆ ವೃಕ್ಷ ಮರಳಿ ಆ ಬೀಜದೊಳಡಗಿತ್ತು
ಆ ಪ್ರಕಾರದಲ್ಲಿ ಲಿಂಗದೊಳಗಿಂದ ಪುರಾತರುದ್ಭವಿಸಿ
ಮರಳಿ ಆ ಪುರಾತನರು ಆ ಲಿಂಗದೊಳಗೆ ಬೆರೆಸಿದರು ನೋಡಯ್ಯಾ
ಇಂತಪ್ಪ ಪುರಾತನರಿಗೆ ನಾನು ಶರಣೆಂದು ಹುಟ್ಟುಗೆಟ್ಟೆನಯ್ಯಾ
ಚನ್ನಮಲ್ಲಿಕಾರ್ಜುನ.

**—ಅಕ್ಕಮಹಾದೇವಿ**

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀ ವಾಣಿ

ಜೀವನವೆನ್ನುವುದು ಒಂದು ಕಲೆ, ಸಂಗೀತ, ಸಾಹಿತ್ಯಾದಿ ಕಲೆಗಳಿದ್ದಂತೆ. ಕಲೆಯು ಸಿದ್ಧಿಗೆ ಸಾಧನೆ ಮುಖ್ಯ. ಸಂಗಿತವನ್ನು ಸಶಾಸ್ತ್ರೀಯವಾಗಿ ಹಲವಾರು ವರ್ಷಗಳ ಕಾಲ ಆ ಕಲೆಯನ್ನು ರೂಢಿಸಿಕೊಂಡ ಸಂಗೀತಗಾರ ಮಧುರವಾಗಿ ಹಾಡಿದರೆ ಶ್ರೋತೃಗಳಿಗೆ ಕರ್ಣಾನಂದವಾಗುತ್ತದೆ. ಅದರೆ ಅಭ್ಯಾಸವಿಲ್ಲದೆ ಕಲೆಯ ಗಂಧವಿಲ್ಲದವನು ಹಾಡಿದರೆ ಅದು ಗಾರ್ದಭ ಸಂಗೀತವಾಗುತ್ತದೆ. ಅದರಂತೆ ಸಾಹಿತ್ಯಾಭ್ಯಾಸವಿಲ್ಲದವನು ಸಾಹಿತ್ಯ ರಚನೆ ಮಾಡಿದರೆ ಅಪಹಾಸ್ಯಕ್ಕೆ ಗುರಿಯಾಗಬೇಕಾಗುತ್ತದೆ. ಅದರಂತೆ ಜೀವನ ಕಲೆಯನ್ನು ಅರಿಯದವನು ಸಮಾಜದಲ್ಲಿ ಹಗುರನಾಗಬೇಕಾಗುವುದು. ಆದರೆ ಈ ಜೀವನ ಕಲೆ ಒಂದು ದಿವಸದಲ್ಲಿ ಒಂದು ತಿಂಗಳಲ್ಲಿ, ಒಂದು ವರ್ಷದಲ್ಲಿ ಬರುವಂಥದಲ್ಲ. ಆ ಕಲೆಯನ್ನು ರೂಢಿಸಿ ಕೊಳ್ಳಬೇಕಾದರೆ ಬದುಕಿನುದ್ದಕ್ಕೂ ನಿರಂತರ ಸಾಧನೆ ನಡೆಯಬೇಕು ‘‘ಯಾವ ಮನುಷ್ಯನಲ್ಲಿಯೂ ನೂರಕ್ಕೆ ನೂರರಷ್ಟು ಒಳ್ಳೆಯ ಗುಣಗಳಿರುವುದಿಲ್ಲ. ಅಥವಾ ನೂರಕ್ಕೆ ನೂರರಷ್ಟು ದುಷ್ಟಗುಣಗಳೂ ಇರುವುದಿಲ್ಲ.’’ ಇದು ತತ್ತ್ವಜ್ಞಾನಿಗಳಮಾತು. ಒಳ್ಳೆಯದೂ ಇದೆ ಕೆಟ್ಟದ್ದೂ ಇದೆ. ಕೆಟ್ಟಗುಣಗಳ ಸಂಖ್ಯೆಯನ್ನು ಕಡಿಮೆ ಮಾಡಿಕೊಂಡು ಒಳ್ಳೆಯ ಗುಣಗಳ ಸಂಖ್ಯೆಯನ್ನು ಬೆಳಸಿಕೊಂಡಾಗ ಆದರ್ಶ ಪುರುಷನಾಗುತ್ತಾನೆ. ಈ ಸಂಖ್ಯೆ ಹೆಚ್ಚಾದಾಗ ಲೋಕಪೂಜ್ಯನಾಗುತ್ತಾನೆ. ಈವೊಂದು ಸಾಧನೆ ನಿರಂತರವಾಗಿ ನಡೆಯಬೇಕು; ನಡೆಯುವಾಗ, ನುಡಿಯುವಾಗ, ವ್ಯವಹರಿಸುವಾಗ ತಿದ್ದಿಕೊಳ್ಳಬೇಕು. ಇದು ಚಿಕ್ಕಂದಿನಿಂದಲೂ ನಡೆಯಬೇಕು. ಹೀಗೆ ಕ್ರಮಬದ್ಧಿತ ಸಾಧನೆ ಒಂದು ಶಕ್ತಿಯಾಗಿ ಬೆಳೆಯುತ್ತದೆ. ಇದನ್ನು ಇಚ್ಛಾಶಕ್ತಿ ಎಂದು ಕರೆಯುತ್ತಾರೆ’ ಇಂಥ ಇಚ್ಛಾಶಕ್ತಿಯನ್ನು ಬೆಳೆಸಿಕೊಂಡಾಗ ಮಾತ್ರ ವ್ಯಕ್ತಿ ಲೋಕವಂದ್ಯನಾಗುತ್ತಾನೆ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ,
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

### ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ಬಸವರಾಜು

ಜಾಹಿರಾತು ಕಾರ್ಯದರ್ಶಿ
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ಆಜೀವ ಸದಸ್ಯತ್ವ 151-00 ರೂ
ವಾರ್ಷಿಕ ಚಂದಾ 12-00 ರೂ

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ—572104
ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ನಮ್ಮ ರಾಷ್ಟ್ರದಲ್ಲಿ ಸಾಮೂಹಿಕ ಸಾವಿನ ಸುದ್ದಿ ಇತ್ತೀಚಿಗಂತೂ ಸರ್ವೇ ಸಾಧಾರಣವಾಗಿ ಬಿಟ್ಟಿದೆ- ಈ ದೃಷ್ಟಿಯಲ್ಲಿ ಕರ್ನಾಟಕಕ್ಕೆ ಈ ವರ್ಷದಲ್ಲಿ ಸಿಂಹ ಪಾಲು ದಕ್ಕಿದೆ. ಬೆಂಗಳೂರಿನಲ್ಲಿ ನಡೆದ ಸರ್ಕಸ್ ದುರಂತ, ವಿಷ ಮದ್ಯಕ್ಕೆ ತುತ್ತಾದ ದಾರುಣ ಸ್ಥಿತಿ, ಅಲ್ಲಲ್ಲಿ ಪಶು ಪ್ರಾಣಿಗಳ ಸಾಮೂಹಿಕ ಸಾವಿನಿಂದಾಗಿ, ಜನ ಸಾಮಾನ್ಯರ ಮೂಕ ಜಂತುಗಳ ಸಾಮೂಹಿಕ ಬಲಿ ದಿನ ದಿನಕ್ಕೂ ದೇಶದಲ್ಲಿ ಅಧಿಕಗೊಳ್ಳುತ್ತಿದೆ. ಇದಲ್ಲದೆ ದಿನನಿತ್ಯ ಪತ್ರಿಕೆಯ ಪ್ರತಿ ಪುಟ್ಟಗಳಲ್ಲಿ ಕೊಲೆ, ಸುಲಿಗೆ, ಇರಿತ ಅತ್ಯಾಚಾರದಿಂದಾಗಿ ಹೇಸಿ ಅಸುನೀಗುವವರ ಸಂಖ್ಯೆ ಕಡಿಮೆಯೇನಲ್ಲ. ಇದರ ಜೊತೆಗೆ ರೈಲುದುರಂತ, ಆಕಸ್ಮಿಕ ವೆಂದು ಹೇಳಲಾದ ವಾಹನಗಳ ಅಪಘಾತ, ಕಾರ್ಯಾಗಾರಗಳ ಸಿಡಿಮದ್ದಿನ ಸ್ಫೋಟ ದುರ್ಘಟನೆಗಳಿಗೆ ಕೊನೆ ಮೊದಲಿಲ್ಲ. ಇದು ಸಾಲದೆಂದು ಕೆಲವು ನೈಸರ್ಗಿಕಹವಾಮಾನದಿಂದಾಗಿ ಪ್ರಾಣ ತೆತ್ತವರ ಸಂಖ್ಯೆ ಊಹೆಗೆ ನಿಲುಕದು. ಹೀಗಾಗಿ ಒಂದಲ್ಲ ಹತ್ತಾರು ರೀತಿಯಲ್ಲಿ ಸಾಯುವವರ ಸುದ್ದಿ ರಾಷ್ಟ್ರ ವ್ಯಾಪಿಯಾಗಿದೆ. ಇದಕ್ಕೆ ಕಾರಣ ಮತ್ತು ಪರಿಹಾರವನ್ನು ಕಂಡು ಹಿಡಿದು ಸೂಕ್ತ ಕ್ರಮ ಕೈಗೊಳ್ಳಬೇಕಾದುದು ಅತ್ಯಗತ್ಯ ಕಾರ್ಯ. ನೈಸರ್ಗಿಕ ಹವಾಮಾನದ ಹಾವಳಿಯನ್ನು ತಡೆಗಟುವುದು ಕಷ್ಟ ಸಾಧ್ಯವಾದರೂ ಮುಂಜಾಗ್ರತೆ ಕ್ರಮಕೈಗೊಳುವುದು ವೈಜ್ಞಾನಿಕ ಜ್ಞಾನ ಪರಿಮಿತಿಗೆ ಸೇರಿದ್ದು. ಇನ್ನುಳಿದ ದುರ್ಘಟನೆಗಳು, ಪ್ರಜೆಗಳ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತ ಸರಕಾರದ ಹೊಣೆಗಾರಿಕೆಯನ್ನು ಅವಲಂಬಿಸಿದೆ. ಈ ದುರ್ಘಟನೆಗಳಿಗೆ, ಸರಕಾರದ ಸಡಿಲವಾದ ಆಡಳಿತ ವ್ಯವಸ್ಥೆಯೆ ? ಅಧಿಕಾರಿಗಳ ನಿರ್ಲಕ್ಷ್ಯ ಹಾಗೂ ಉದಾಸಿನ ಮನೋಭಾವವೇ ? ದಕ್ಷ ಪ್ರಾಮಾಣಿಕ ಮೇಲ್ವಿಚಾರಕರ ಅಭಾವವೆ ? ಹಲವು ದುಷ್ಕರ್ಮಿಗಳ ಕೈವಾಡವೇ ?ಅಧಿಕಾರ, ಹಣದ ಆಮಿಷಕ್ಕೊಡ್ಡಿದ ಸಂಚೆ? ಇತ್ಯಾದಿ ಕೂಲಂಕಷ ಸಂಶೋಧನೆ ಮಾಡಿ ಸಮಾಜ ದೇಶ ಸಂಕಷ್ಟಕ್ಕೆ ಸಿಕ್ಕಿ ನರಳುತ್ತಿರುವುದನ್ನು ತಪ್ಪಿಸಬೇಕು. ಕಾನೂನಿನ ಸ್ಥಿತಿ ದಿನದಿನಕ್ಕೆ ಸಡಿಲಗೊಳ್ಳುತ್ತಿದೆ. ಅಪರಾಧಿಗಳ ತನಿಖೆ ನಿಷ್ಪಕ್ಷಪಾತವಾಗಿ ನಡೆಯುತ್ತಿಲ್ಲ. ರಾಜಕೀಯ ವತ್ತಡ ಬಂದು ಅಕ್ಷಮ್ಯ ಅಪರಾಧಿಯೂ ನಿರಪರಾಧಿಯೆಂದು ಸಾಬೀತಾಗುವ ಸ್ಥಿತಿ ಇದೆ. ರಾಷ್ಟ್ರಹಿತಕ್ಕೆ ಧಕ್ಕೆತರುವವರು ಯಾರಾದರೂ ಸರಿಯೆ ದಂಡಾರ್ಹರು. ಸತ್ತವರಿಗೆ ಪರಿಹಾರಕೊಡುವುದಷ್ಟೇ ಅಲ್ಲ ಅದರ ಜೊತೆಗೆ ದುರ್ಘಟನೆಗಳು ಮರುಕಳಿಸದಂತೆ ಸೂಕ್ತ ಎಚ್ಚರಿಕೆ ಕ್ರಮ ಅಗತ್ಯ. ಮುಂದೆ ನಮ್ಮ ರಾಷ್ಟ್ರವು ಭಯಂಕರ ಕರಾಳ ದಿನವನ್ನು ಎದುರಿಸಬೇಕಾದ ಪ್ರಸಂಗ ಬಂದರೂ ಬರಬಹುದು. ಆ ಮುಂದಿನ ಕರಾಳ ದಿನಕ್ಕೆ ಇಂದಿನ ಈ ದುರ್ಘಟನೆಗಳು ನಾಂದಿಯಾಗಬಾರದು. ಭವಿಷ್ಯದ ಸುದಿನಕ್ಕೆ ಸೂಚನೆಯಾಗಬೇಕು.

# ನವನೀತ

**ಪ್ರತಿಕ್ಷಣಮಯಂ ಕಾಲಃಕ್ಷೀಯ ಮಾಣೋ ನ ಲಕ್ಷ್ಯತೇ ।**
**ಆಮಕುಂಭ ಇವಾಂಭಃಸ್ಥೋ ವಿಶೀರ್ಣೋ ನ ವಿಭಾವ್ಯತೇ ॥**

— ಗರುಡ ಪುರಾಣ

ಪ್ರತಿಕ್ಷಣದಲ್ಲಿಯೂ ಕಾಲವು ಕಳೆಯುತ್ತಿದ್ದರೂ ಗೊತ್ತಾಗುವುದಿಲ್ಲ. ಹಸೀ ಮಡಿಕೆಯು ನೀರಿನಲ್ಲಿ ಕರಗುತ್ತಿದ್ದರೂ ಗೊತ್ತಾಗುವುದಿಲ್ಲ.

  

**ಯತ್ಕರ್ಮ ಕುರ್ವತೋಽಸ್ಯ ಸ್ಯಾತ್ ಪರಿತೋಷೋಂತರಾತ್ಮನಃ।**
**ತತ್ಪ್ರಯತ್ನೇನ ಕುರ್ವೀತ ವಿಪರೀತಂತು ವರ್ಜಯೇತ್ ॥**

— ಮನುಸ್ಮೃತಿ

ಯಾವ ಕೆಲಸವನ್ನು ಮಾಡುವಾಗ ಮನಸ್ಸಿಗೆ ಸಂತೋಷವಾಗುತ್ತದೆಯೋ ಅದನ್ನು ಕಷ್ಟಪಟ್ಟಾದರೂ ಮಾಡಬೇಕು. ಅದಕ್ಕೆ ವಿರುದ್ಧವಾದುದನ್ನು ಮಾಡಬಾರದು.

§§ §§ §§

**ಜನ್ಮೈಶ್ವರ್ಯ ಶ್ರುತ ಶ್ರೀ ಭಿರೇಧಮಾನಮದಃ ಪುಮಾನ್ ।**
**ನೈವಾರ್ಹತ್ಯಭಿಧಾತುಂ ವೈ ತ್ವಾಮಕಿಂಚನ ಗೋಚರಮ್ ॥**

— ಭಾಗವತ

ಹುಟ್ಟು, ಐಶ್ವರ್ಯ, ವಿದ್ಯೆ, ಹಣಗಳಿಂದ ಮದವೇರಿದ ಮನುಷ್ಯನು, ಭಗವಂತನ ನಾಮವನ್ನು ಹೇಳಲು ಯೋಗ್ಯನಲ್ಲ. ಏಕೆಂದರೆ ಅವನು ಬಡವರಿಗೆ ಮಾತ್ರ ಗೋಚರಿಸತಕ್ಕವನು.

# ಚಿಂತನ

## ಒಲ್ಲಿಯ ಸುಖ ಅಲ್ಲಿ ಉಂಟೆ

—ಟಿ.ಆರ್. ಮಹಾದೇವಯ್ಯ

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ
ಖೋಪಾತ್ತಂಗಳವೆಂದರುಪುಗು
ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್–ಎಂದು ಹೇಳಿರುವ

ಕವಿರಾಜಮಾರ್ಗಕಾರ ಜೀವನದಲ್ಲಿ ಒಳ್ಳೆಯದು ಯಾವುದು ಕೆಟ್ಟದ್ದು ಯಾವುದು ಎಂಬುದನ್ನು ಶ್ರೇಷ್ಠ ಕವಿಗಳ ಕೃತಿಗಳು ತಿಳಿಸಿಕೊಡುತ್ತವೆ ಎಂದಿದ್ದಾನೆ. ಪಾಪ ಯಾವುದು ಪುಣ್ಯ ಯಾವುದು; ಹಿತವನ್ನುಂಟುಮಾಡುವ ಅಂಶಗಳು ಯಾವುವು, ಅಹಿತಕಾರಿಯಾದ ಪ್ರಕಾರಗಳು ಯಾವುವು ಎಂದು ತಿಳಿಸುವ ಕವಿಗಳ ಜೀವನದ ಮೌಲ್ಯಗಳನ್ನು ನಮಗೆ ಮನಗಾಣಿಸಿದ್ದಾರೆ.

ಮನುಷ್ಯ ಸಾಮಾನ್ಯವಾಗಿ ಇಹದ ಬಾಳನ್ನು ಕಡೆಗಣಿಸುತ್ತಾನೆ. ಅವನ ದೃಷ್ಟಿ ಸದಾ ಸ್ವರ್ಗದ ಕಡೆಗಿರುತ್ತದೆ. ಈ ಬಾಳು ಬರೀ ಗೋಳು, ಇದು ಸಾಕು. ಸ್ವರ್ಗ ಸುಖ ಬೇಕೆಂದು ಬಾಯಿ ಬಿಡುತ್ತಾನೆ. ಆದರೆ ಇಹದ ಬಾಳು ಪರಕ್ಕಿಂತ ಶ್ರೇಷ್ಠ, ಮಾನವ ಜನ್ಮ ದೊಡ್ಡದು. ಕರ್ಮಭೂಮಿಯಾದ ಈ ಇಹಲೋಕದ ಬದುಕು ಮಾನ್ಯವಾದುದು ಎಂಬ ಸಂಗತಿಯನ್ನು ನಮ್ಮ ಕವಿಗಳು ತಮ್ಮ ಕಾವ್ಯಗಳಲ್ಲಿ ಕೆಲವು ಕಡೆ ನೇರವಾಗಿ, ಕೆಲ ಸಂದರ್ಭದಲ್ಲಿ ಸೂಚ್ಯವಾಗಿ, ಕಥಾ ಪ್ರಸಂಗದೊಡನೆ ಬೆರಸಿಯೋ, ಉಜ್ವಲ ಪಾತ್ರದ ಮುಖಾಂತರ ಹೊಮ್ಮಿಸಿಯೋ ನಿರೂಪಿಸಿದ್ದಾರೆ. ಅಂಥ ಒಂದು ಪರಿಣಾಮಕಾರಿಯಾದ ಪ್ರಸಂಗ ಹರಿಹರನ 'ಬಸವರಾಜದೇವರ ರಗಳೆ' ಯಲ್ಲಿದೆ.

ಬಸವಣ್ಣ ಮರ್ತ್ಯಲೋಕದಲ್ಲಿ ಅವತರಿಸಿದ ಹಿನ್ನೆಲೆಯನ್ನು ವಿವರಿಸುವ ಸಂದರ್ಭ : ಕೈಲಾಸದ ಶಿವನ ಒಡ್ಡೋಲಗ. ಶಿವನ ಅನುಗ್ರಹಕ್ಕೆ ಪಾತ್ರನಾದ ವೃಷಭನಾಥ ಕಂಪುಳ್ಳ ಸಂಪಗೆಯನ್ನು ಅಲ್ಲಿ ನೆರೆದವರಿಗೆಲ್ಲಾ ಹಂಚುವಾಗ ಉತ್ಸಾಹ ಭರದಲ್ಲಿ ಷಣ್ಮುಖನಿಗೆ ಕೊಡದೆ ಕೊಟ್ಟೆನೆಂದು ಸಾಧಿಸುತ್ತಾನೆ. ಕೋಪಗೊಂಡ ಶಿವ ಅವನನ್ನು ನೀನು ಭೂಲೋಕದಲ್ಲಿ ಹುಟ್ಟು ಎಂದು ಹೇಳುತ್ತಾನೆ. ಕೈಲಾಸದಲ್ಲಿ ಶಿವನ ಸಮ್ಮುಖದಲ್ಲಿ ಶಿವಗಣದೊಡನೆ ಇದ್ದ ವೃಷಭನಾಥನಿಗೆ ಆ ಮಾತು ಸಿಡಿಲಾಗುತ್ತದೆ. ನಾನು ಭೂಮಿಗೆ ಹೋಗಲಾರೆ ಎನ್ನುತ್ತಾನೆ.

ಒಂದು ಜನನಂ ನಿನಗೆ ದೊರಕಿತ್ತು
ಮುದದಿಂದ ಹೋಗಯ್ಯ ಜನನವಂ ನೀಹೊತ್ತು

ಧರಣಿಯೊಳು ವೃಷಭಮುಖ ಹುಟ್ಟೆಂದು ಬೆಸಸುತಿರೆ
ಕೊರಗಿ ಕಳೆಗುಂದಿ ಬಿನ್ನೈಸಿದಂ ಕೇಳುತಿರೆ
" ಇಂದುಧರ ಚಿತ್ತೈಸೆನುತ್ತೆಂದು ಕೈ ಮುಗಿದು
ತಂದೆ ಶರಣಾಗು ಶರಣೆನಗೆ ಹುಟ್ಟಲ್ಕರಿದು
ಕಾಮಾರಿ ಷಡುವರ್ಗದುಬ್ಬರಂ ಧರೆಯಲ್ಲಿ
ಸೋಮಧರ ತಾಪತ್ರಯದ ಬೇಗೆ ಪಿರಿದಲ್ಲಿ
ಹುಸಿ ದಂಬು ಹಿಂಸೆ ಮೂರ್ಖತೆಯುಂಟು ಧರೆಯೊಳಗೆ
ವಶವಲ್ಲದಾಲೀದವನ್ಯಾಯದಿಳೆಯೊಳಗೆ
ಅಲ್ಲಿ ಜನಿಯಿಸಿ ಬಳಿಕ್ಕೆಂದು ಬಪ್ಪೆಂ ದೇವ
ಎಲ್ಲ ತೆಱದಿಂ ನಿಮಗೆ ದೂರವಪ್ಪೆಂ ದೇವ
ಕರುಣಿಪುದು.

ಆಗ ಶಿವನು ತಾನೂ ಅವನ ಜೊತೆಯಲ್ಲೇ ಬರುವುದಾಗಿ ಭರವಸೆ ನೀ ಧರೆಗೆ ಕಳುಹಿಸಿಕೊಡುತ್ತಾನೆ.

ಈ ಕಾವ್ಯದ ಕೊನೆಯಲ್ಲಿ ಇನ್ನೊಂದು ಪ್ರಸಂಗವಿದೆ. ವೃಷಭನಾಥ ಬ ವಣ್ಣನಾಗಿ ಭೂಮಿಯಲ್ಲಿ ಹುಟ್ಟಿ ಧರ್ಮೋದ್ಧಾರ ಕಾರ್ಯವನ್ನು ಮಾಡಿ ಕೃತಕೃತ್ ನಾದಾಗ ಶಿವನು ಆತನನ್ನು ಕೈಲಾಸಕ್ಕೆ ಬಾ ಎಂದು ಕರೆಯುವನು. ಆಗ ಆ ಅಂದದ್ದೇನು ?

ಕಾಮದ ಅಬ್ಬರ, ಅರಿಷಡ್ವರ್ಗದ ಉಬ್ಬರ, ತಾಪತ್ರಯದ ಬೇಗೆ ಹುಸಿದಂಬ ಹಿಂಸೆ ಮೂರ್ಖತೆಯಿರುವ ಭೂಮಿಯಲ್ಲಿ ನಾನು ಹುಟ್ಟಲಾರೆ ಎಂದ ಆತನೆ ಇಲ್ಲಿಯ ಸುಖ ಅಲ್ಲುಂಟೇ " ಎನ್ನುತ್ತಾನೆ.

ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ
ಪೊಡವಿಯೊಳಗಿರವು ಸಾಲ್ವುದು ಬಾ ಮಗನೆ ನಿನಗೆ
ಎನೆ ಕೇಳ್ದು ನಸುನಗುತೆ ನುಡಿದನಾ ಸಂಗರಿಗೆ
"ಸಂಗಯ್ಯ, ಬಾಯೆಂದು ಕರೆವೆ ನೀವೆನ್ನುವಂ
ಶರಣರೊಕ್ಕುದರ ಸವಿ ಕೈಲಾಸದೊಳಗುಂಟೆ
ಶರಣ ಸಂಗದ ಸುಖಂ ಕೈಲಾಸದೊಳಗುಂಟೆ
ಇಲ್ಲಿಯ ಸುಖಂ ದೇವ ಅಲ್ಲಿಯುಳ್ಳಡೆ ಲೇಸು
ಅಲ್ಲೆನ್ನೆ ಈಗಳೇ ಕೊಂಡು ಹೋಹುದು ಲೇಸು....ಎಂದು ಬಿನ್ನೈಸಿ

ಇಲ್ಲಿನ ಸುಖ ಅಲ್ಲುಂಟೆ ಎಂದು ಬಸವಣ್ಣನ ಮೂಲಕ ಶಿವನನ್ನೇ ಪ್ರಶ್ನಿಸಿ ಸಿರುವ ಕವಿ ಭುವಿಯಬಾಳು ಸ್ವರ್ಗಕ್ಕಿಂತ ಮಿಗಿಲೆಂದು ಸಾರಿದ್ದಾನೆ. ಇದನರಿತ ಮನುಷ್ಯ, ಇಹದ ಬಾಳನ್ನು ಬೀಳಾಗಿಸದೆ ಇಹ–ಪರ ಸಾಧನೆಯ ಪೂರ್ಣ ಬಾಳನ್ನು ಬಾಳಬೇಕು ಎಂಬುದೇ ? (ಆಕಾಶವಾಣಿ ಕೃಪೆ)

ಮುಂದುವರಿದ ಲೇಖನ

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ದಿ. ಜೆ. ರುದ್ರಪ್ಪ

ಮನುಷ್ಯನಿಗೆ ತನ್ನ ಜೀವನದಲ್ಲುಂಟಾಗುವ ಸುಖದುಃಖಗಳು ಎರಡು ಬಗೆಯಾಗಿ ನಮ್ಮ ಅನುಭವದಲ್ಲಿವೆ. ಆಂತರಂಗಿಕವಾದ ಸ್ಮರಣ, ಅನುಸಂಧಾನಗಳಿಂದುಂಟಾಗುವುದೊಂದು ಬಗೆ. ಬಾಹ್ಯಪದಾರ್ಥ ತಿಳಿವಳಿಕೆಗಳು ಮತ್ತು ಇಂದ್ರಿಯಗಳ ಮೂಲಕ ಆಗುವ ಪದಾರ್ಥ ಸಂಯೋಗಗಳು ಇನ್ನೊಂದು ಬಗೆ. ಈ ಎರಡು ಕ್ರಮಗಳಿಂದುಂಟಾಗುವ ಸುಖದುಃಖಗಳನ್ನು ವಿಮರ್ಶೆ ಮಾಡಿದರೆ ಜ್ಞಾನ ತಂತುಗಳ ಚಲನ ಅಥವಾ ಕಂಪನ ರೂಪವಾಗಿಯೇ ಆಗುವುದೆಂದು ಅನುಭವಕ್ಕೆ ಬರುತ್ತವೆ. ಸುಖದುಃಖಗಳು ಭೂತಗಳ ಐದು ಗುಣಗಳಲ್ಲಿ ಕೆಲವು ಗುಣಗಳ ಪ್ರತಿಫಲನಗಳಾಗಿ ಅವುಗಳ ದೆಸೆಯಿಂದ ಜ್ಞಾನ ತಂತುಗಳ ಚಲನ ರೂಪವಾಗಿ ಅವಾಂತರವನ್ನುಂಟು ಮಾಡುತ್ತವೆ. ಕಾಮಕ್ರೋಧಾದಿಗಳು ಇಂತಹ ಅವಾಂತರಗಳು. ಇವು ನಮ್ಮ ಅನುಭವದಲ್ಲಿವೆ. ಈ ರೀತಿಯಿಂದಾದ ವೃತ್ತಿಗಳು ಚಿತ್ತಿನಲ್ಲಿ ಸೇರಿದಾಗ ಸುಖದುಃಖಾನುರೂಪವಾದ ಅನುಭವವಿಲ್ಲ. ಮರಳಿ ಸುಖದುಃಖಗಳುಂಟಾಗಬೇಕಾದರೆ ಅಂತರೀಯವಾದ ಸ್ಮರಣವಾಗಲಿ ಬಾಹ್ಯವಾದ ಪದಾರ್ಥ ಸಂಯೋಗವಾಗಲಿ ಏರ್ಪಡಬೇಕು. ಜ್ಞಾನಿಯಾದವನು ಕ್ಷಣಿಕವಾದ ಈ ಸುಖ ದುಃಖಗಳಲ್ಲಿ ಅಭಿಮಾನವನ್ನಿಡುವುದಿಲ್ಲ. ಸುಖದುಃಖಗಳು ಕೇವಲ ಪ್ರತಿಬಿಂಬಗಳು ಮಾತ್ರವೆಂದು ತಿಳಿಯುತ್ತಾನೆ. ಹೊರಗಿನ ಪದಾರ್ಥಗಳು ಇಂದ್ರಿಯಗಳಿಗೆ ಸಂಬಂಧಿಸದೆ ಇರುವವರೆಗೂ ನಮಗೆ ಸುಖದುಃಖಗಳಿಲ್ಲ. ಇಂದ್ರಿಯಗಳಿಗೆ ಪದಾರ್ಥಗಳ ಸಂಯೋಗ ಏರ್ಪಟ್ಟು ಅದರ ತಿಳುವಳಿಕೆ ಮತ್ತು ಅನುಭವವು ಚಿತ್ತಿನಲ್ಲಿ ಸೇರಿಹೋದರೂ ನಮಗೆ ಸುಖದುಃಖಗಳಿಲ್ಲ. ಇಂದ್ರಿಯ ಪದಾರ್ಥ ಸಂಯೋಗದಿಂದ ಜ್ಞಾನವುಂಟಾಗಿ ಚಿತ್ತಿನಲ್ಲಿ ಸೇರುವುದರೊಳಗಿರುವ ಮಧ್ಯಸ್ಥಿತಿಯಲ್ಲಿ ಸುಖದುಃಖಗಳುಂಟಾಗುತ್ತವೆ.

ಬಿಂಬ ಪ್ರತಿಬಿಂಬ ನ್ಯಾಯದ ತಿಳುವಳಿಕೆಯಿಂದ ಸುಖ ದುಃಖಗಳ ನಿಜಸ್ವರೂಪವೂ ತಿಳಿದು ಶಾಂತಿಗೆ ಅವಕಾಶವಾಗುತ್ತದೆ.

ನಮಗೆ ಬರುವ ಎಲ್ಲಾ ತಿಳುವಳಿಕೆಗಳೂ ಪ್ರತಿಬಿಂಬಮಾತ್ರವಾಗಿವೆ. ಅಂತರನುಭವಗಳೇ ಆಗಲಿ ಹೊರಗಿನ ಪದಾರ್ಥಗಳಿಂದುಂಟಾದ ತಿಳಿವಳಿಕೆಗಳೇ ಆಗಲಿ ಈ ಪ್ರತಿಬಿಂಬದ ಎಲ್ಲೆಯನ್ನು ಮೀರಲಾರವು. ಭೇದ ಜ್ಞಾನಕ್ಕೆ ಆಕರವಾಗಿರುವ ಈ ಪ್ರತಿಬಿಂಬವನ್ನು ಮನನ ಮಾಡಿದರೆ ಅಭೇದವ್ಯಾಪ್ತಿಯನ್ನುಂಟುಮಾಡುವ ಸ್ವರೂಪಾನುಭವಕ್ಕೂ ಇವುಗಳಿಗೂ ಇರುವ ವ್ಯತ್ಯಾಸವೂ ತಿಳಿಯುತ್ತದೆ. ದುಃಖಕ್ಕೆ

ಕಾರಣಗಳಾಗಿರುವ ಭೇದ ಪ್ರತಿಬಿಂಬಗಳನ್ನು ಉಪೇಕ್ಷಿಸಿ ಸ್ವರೂಪಾನುಭವವನ್ನು ಸಂಪಾದಿಸುವುದಕ್ಕೆ ಬಿಂಬ ಪ್ರತಿಬಿಂಬ ನ್ಯಾಯವು ಪರಮೋಪಕಾರಿಯಾಗಿದೆ. ವಿಶ್ವವೆಲ್ಲಾ ಚಿತ್ತಿನಲ್ಲಿ ಪ್ರತಿಫಲಿಸಿದೆಯೆಂಬ ದೃಢ ವಿಶ್ವಾಸವೇರ್ಪಟ್ಟಲ್ಲಿ ಜೀವನಿಗೆ ರಾಗ ದ್ವೇಷಗಳಿರುವುದಿಲ್ಲ. ಚಿದಾನಂದವನ್ನು ಪಡೆಯುತ್ತಾನೆ.

ತೇನ ಸಂವಿತ್ತಿ ಮುಕುರೆ ವಿಶ್ವಮಾತ್ಮಾನಮರ್ಪಯತ್ ।
ನಾಥಸ್ಯ ವದತೋಽಮುಷ್ಯ ವಿಮಲಾಂ ವಿಶ್ವರೂಪತಾಂ ॥

ತಂತ್ರಾಲೋಕ–ಆನ್ಹಿಕ ೩, ಶ್ಲೋಕ ೪೪ :

**ತತ್ವ ಪರಿಗಣನೆ :—** ಪ್ರಾಚೀನರು ಅಲೌಕಿಕ ವಿಷಯಗಳನ್ನು ತಿಳಿಯುವುದಕ್ಕೆ ಕೆಲವು ನಿಯಮಗಳನ್ನು ಅಂಗೀಕರಿಸಿರುತ್ತಾರೆ. ಆ ನಿಯಮಗಳನ್ನನುಸರಿಸಿ ಈಗ ನಮ್ಮ ಅನುಭವದಲ್ಲಿರುವ ಲೌಕಿಕ ವಿಷಯಗಳನ್ನು ಅನುಭವದಲ್ಲಿಲ್ಲದಿರುವ ಅಲೌಕಿಕ ವಿಷಯಗಳನ್ನೂ ಯಥಾರ್ಥವಾಗಿ ತಿಳಿಯಬಹುದು. ಸ್ಥೂಲವಾದ ಪ್ರಪಂಚ ಜ್ಞಾನದಿಂದ ಇದಕ್ಕೆ ಕಾರಣವಾಗಿರುವ ಸೂಕ್ಷ್ಮವಾದ ತತ್ವಗಳನ್ನು ಅರಿಯಬಹುದು. ಈ ವಿಶ್ವಕ್ಕೆ ಮೂಲ ಕಾರಣವಾಗಿರುವ ತತ್ತ್ವವನ್ನು ತಿಳಿಯಬೇಕಾದರೆ ನಮ್ಮ ಅನುಭವದಲ್ಲಿರುವ ಸ್ಥೂಲ ಪ್ರಪಂಚದ ಜ್ಞಾನದಿಂದ ಊಹಿಸಬೇಕು. ಎಲ್ಲಾ ಶಾಸ್ತ್ರಜ್ಞರು ಇಂತಹ ಜ್ಞಾನವನ್ನು ಪಡೆಯುವುದಕ್ಕೆ ತತ್ವಜ್ಞಾನ ಎಂದು ಹೇಳುತ್ತಾರೆ. ತತ್ ಎಂದರೆ ಅದು, ತತ್ವ ಅಂದರೆ ಅದರ ನಿಜಸ್ವರೂಪ. ಎಲ್ಲಾ ತತ್ವಗಳನ್ನೂ ಪ್ರತ್ಯಕ್ಷದಿಂದಲೇ ತಿಳಿಯುವುದಕ್ಕೆ ಸಾಧ್ಯವಿಲ್ಲ. ಕೆಲವನ್ನು ಪ್ರತ್ಯಕ್ಷದಿಂದಲೂ ಕೆಲವನ್ನು ಅನುಮಾನದಿಂದಲೂ ಮಿಕ್ಕವುಗಳನ್ನು ಆಗಮದಿಂದಲೂ ತಿಳಿಯಬೇಕು. ಸೂಕ್ಷ್ಮತತ್ವವು ಸ್ಥೂಲ ತತ್ವವಾಗಬೇಕಾದರೆ ಕೆಲವು ಬದಲಾವಣೆಗಳನ್ನು ಪಡೆಯುತ್ತದೆ. ಈ ಬದಲಾವಣೆಗಳನ್ನು ಶಾಸ್ತ್ರದಿಂದಲೇ ತಿಳಿಯಬೇಕಾಗಿದೆ. ಈ ತತ್ವಸ್ವರೂಪಗಳಿಗೆ ಲೌಕಿಕ ದೃಷ್ಟಾಂತವನ್ನು ಕೊಡುವುದಾದರೆ ಗಣಿತಶಾಸ್ತ್ರದ ಅಂಕೆಗಳನ್ನು ಹೋಲಿಸಬಹುದು. ಒಂಭತ್ತೆಂಬ ಅಂಕದಲ್ಲಿ ಮಿಕ್ಕ ಎಂಟು ಅಂಕಗಳೂ ಇರುತ್ತವೆ. ಅಂದರೆ ಸ್ಥೂಲವಾದ ವಿಶ್ವದಲ್ಲಿ ಸೂಕ್ಷ್ಮವಾದದ್ದು ಅಡಗಿದೆ. ಒಂದು ಎಂಬ ಅಂಕ ಬೆಳೆಯುತ್ತಾ ಹೋದರೆ ಹತ್ತರವರೆಗೂ ನಡೆಯುತ್ತದೆ. ಅನಂತರ ಸಂಕಲನ ವ್ಯವಕಲನಾದಿ ಭೇದಗಳಿಂದ ಅನಂತವಾದ ವ್ಯಾಪ್ತಿಯನ್ನು ಪಡೆಯುತ್ತದೆ. ಲೆಕ್ಕಕ್ಕೆ ಒಂಭತ್ತು ಅಂಕಗಳು ಹೇಗೆ ಅನಂತವಾದ ವ್ಯವಹಾರಕ್ಕೆ ಕಾರಣವಾಗುತ್ತವೆಯೋ ಅದೇರೀತಿಯಾಗಿ ೩೬ ತತ್ವಗಳು ವಿಶ್ವದ ಬೆಳವಣಿಗೆಗೂ ತಿಳಿವಳಿಕೆಗೂ ಕಾರಣವಾಗಿರುತ್ತವೆ. ಮೊದಲನೆಯದಾದ ಶಿವತತ್ವದಲ್ಲಿ ಮಿಕ್ಕ ಮೂವತ್ತೈದು ತತ್ವಗಳು ಅಡಗಿವೆ. ಹಾಗೆಯೇ ಕ್ರಮವಾಗಿ ಮೇಲಿನ ತತ್ವದಲ್ಲಿ ಕೆಳಗಿನ ತತ್ವಗಳು ಅಡಗಿರುತ್ತವೆ. ಕೆಳಗಿನ ತತ್ವಗಳು ಮೇಲಿನ ತತ್ವಗಳ ಸಂಬಂಧವಿಲ್ಲದೆ ಇರಲಾರವು. ಒಂದು ವ್ಯಕ್ತಿಯ ಸಂಪುಟದಲ್ಲಿ ಮೂವತ್ತಾರು ತತ್ವಗಳು ಕೇಂದ್ರೀಕೃತವಾಗಿರುವುದು

ಷ್ಟಿಯ ವೈಚಿತ್ರ್ಯ. ಇದನ್ನು ಪಿಂಡಾಂಡವೆಂದು ಹೇಳುವ ರೂಢಿಯಿದೆ. ಈ ಮಹಾ ವಿಶ್ವವೂಕೂಡ ಮುವತ್ತಾರು ತತ್ವಗಳ ಸಂಪುಟವೇ ಆಗಿದೆ. ಸ್ಥೂಲವಾದ ಶ್ವವು ಪ್ರಳಯವಾಗಿ ಸೂಕ್ಷ್ಮವಾದ ತತ್ವದಲ್ಲಿ ಸೇರುವುದುಂಟು. ಮರಳಿ ಈಶ್ವ ಚ್ಛೆಯಿಂದ ಮಹಾ ವಿಶ್ವವು ಸೃಷ್ಟಿಯಾಗುತ್ತದೆ. ಈ ಮಹಾ ವಿಶ್ವಕ್ಕೆ ಬ್ರಹ್ಮಾಂಡ ಂದು ಸಂಜ್ಞೆ. ಬ್ರಹ್ಮಾಂಡದಲ್ಲಿರುವ ಎಲ್ಲಾ ಅಂಶಗಳೂ ಪಿಂಡಾಂಡದಲ್ಲಿ ಸೂಕ್ಷ್ಮ ೂಪದಿಂದಿರುತ್ತವೆ. ಪಿಂಡಾಂಡದಲ್ಲಿರುವ ಎಲ್ಲಾ ಅಂಶಗಳೂ ಬ್ರಹ್ಮಾಂಡದಲ್ಲಿ ಸ್ತಾರವಾಗಿರುತ್ತವೆ.

ಹೀಗೆ ಮಹಾ ವಿಶ್ವದ ಸೃಷ್ಟಿ ಸ್ಥಿತಿ ಪ್ರಳಯಗಳು ಮೂವತ್ತಾರು ತತ್ವ ಿಂದ ನಡೆಯುತ್ತಿರುತ್ತವೆ. ಆ ಮೂವತ್ತಾರು ತತ್ವಗಳು ಈ ರೀತಿಯಲ್ಲಿ ಪರಿ ಣಿಸಲ್ಪಟ್ಟಿವೆ.

| ಪರಮಶಿವ | ವಿಶ್ವೋತ್ತೀರ್ಣ | ಪರಾವಸ್ಥೆ | ಪೂರ್ಣಅಹಂಭಾವ |
|---|---|---|---|
| ಶಿವ — ಶಕ್ತಿ — ಸದಾಶಿವ — ಈಶ್ವರ — ಶುದ್ಧವಿದ್ಯಾ | ಈ ಐದು ಶುದ್ಧಾಧ್ವಗಳು | ಪರಪರಾವಸ್ಥೆ | ಇಲ್ಲಿ ಅಹಂಭಾವ ಇದಂಭಾವ ಎರಡೂ ಇರುತ್ತವೆ. |
| ಮಾಯಾ — ಕಲಾ — ವಿದ್ಯಾ — ರಾಗ — ಕಾಲ — ನಿಯತಿ | ಮಾಯಾಕೆಳಗಿರುವ ತತ್ವಗಳು ಅಶುದ್ಧಾಧ್ವಗಳು. ಇವುಗಳಲ್ಲಿ ಮಾಯೆಯಿಂದ ನಿಯತಿವರೆಗೂ ಇರುವವುಗಳು ಷಟ್ಕಂಚುಕಗಳು | ಅಪರಾವಸ್ಥೆ | ಈ ೩೧ ತತ್ವಗಳು ಪೂರ್ತಿ ಇದಂ ಭಾವಾಪನ್ನವಾಗಿರುತ್ತವೆ. |

ಪುರುಷ, ಪ್ರಕೃತಿ, ಬುದ್ಧಿ, ಅಹಂಕಾರ, ಮನಸ್ಸು.

ಜ್ಞಾನೇಂದ್ರಿಯಗಳು:- ಶ್ರವಣೇಂದ್ರಿಯ, ಸ್ಪರ್ಶನೇಂದ್ರಿಯ; ದರ್ಶನೇಂ

ದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ.

**ಕರ್ಮೇಂದ್ರಿಯಗಳು:-** ವಾಕ್, ಪಾಣಿ, ಪಾದ, ಪಾಯು, ಉಪಸ್ಥ.

**ತನ್ಮಾತ್ರಗಳು:-** ಶಬ್ದತನ್ಮಾತ್ರ, ಸ್ಪರ್ಶತನ್ಮಾತ್ರ, ರೂಪತನ್ಮಾತ್ರ ರಸತನ್ಮಾತ್ರ, ಗಂಧತನ್ಮಾತ್ರ.

**ಪಂಚಭೂತಗಳು:-** ಪೃಥವಿ, ಅಪ್ಪು; ತೇಜಸ್ಸು, ವಾಯು, ಆಕಾಶ.

ಈ ಮೂವತ್ತಾರು ತತ್ವಗಳ ಸರಿಯಾದ ತಿಳಿವಳಿಕೆಯಿಂದ ಪಿಂಡಾಂಡ ಮತ್ತು ಬ್ರಹ್ಮಾಂಡಗಳ ನಿಜಸ್ಥಿತಿಯು ಅರಿವಾಗುತ್ತದೆ. ಸಾಮಾನ್ಯ ಮನಸ್ಯರಿಗೆ ಈ ತತ್ವಗಳ ಅರಿವು ವಿಶದವಾಗಿ ಮೊದ ಮೊದಲು ಆಗದಿರಬಹುದು. ಈ ಕೆಳಗಿನ ವಿವರಗಳನ್ನು ತಿಳಿಯುವುದರಿಂದ ಸುಲಭ ಗ್ರಾಹ್ಯವಾಗುವುದು. ಪೃಥಿವ್ಯಾದಿ ಪಂಚಭೂತಗಳೂ ಚಕ್ಷುರಾದಿ ಇಂದ್ರಿಯಗಳೂ ಎಲ್ಲರ ಅನುಭವದಲ್ಲಿವೆ. ಹೀಗೆ ತಿಳಿದಿರುವ ಮತ್ತು ತಿಳಿಯದಿರುವ ತತ್ವಗಳನ್ನು ತನ್ನ ಸ್ವಪ್ರಯತ್ನದಿಂದಲೂ ಭಾವನಾ ಬಲದಿಂದಲೂ ವಿಶದವಾಗಿ ಸಾಕ್ಷಾತ್ಕರಿಸಿ ಕೊಳ್ಳಬೇಕು. ಪ್ರಪಂಚದಲ್ಲಿ ನಮ್ಮ ತಿಳಿವಳಿಕೆಯು ಭಾವನಾ ರೂಪವಾಗಿಯೂ ಅಭಾವ ರೂಪವಾಗಿಯೂ ಇದೆ. ಭಾವರೂಪವೆಂದರೆ ಈ ಪದಾರ್ಥವಿದೆ, ಈ ಅಂಶ ನನಗೆ ತಿಳಿದಿದೆ ಅನ್ನುವ ತಿಳಿವಳಿಕೆ. ಅಭಾವರೂಪವೆಂದರೆ ಈ ಪದಾರ್ಥವಿಲ್ಲ. ಈ ವಿಷಯ ನನಗೆ ತಿಳಿದಿಲ್ಲ ಎಂಬ ತಿಳಿವಳಿಕೆ. ಭಾವರೂಪವಾದ ಇದೆ ಎಂಬ ತಿಳಿವಳಿಕೆ ಎಷ್ಟು ಪ್ರಯೋಜಕವೋ ಅಭಾವ ರೂಪವಾದ ಇಲ್ಲ ಎಂಬ ತಿಳಿವಳಿಕೆಯು ಅಷ್ಟೇ ಮಹತ್ವವುಳ್ಳದ್ದಾಗಿರುತ್ತದೆ. ಹೀಗೆ ಇಲ್ಲ ಎಂಬ ತಿಳಿವಳಿಕೆಯು ಮುಂದಿನ ವ್ಯವಹಾರಕ್ಕೆ ಸಹಕಾರಿಯಾಗಿರುವುದರಿಂದ ಅಭಾವ ವ್ಯವಹಾರವು ಲೌಕಿಕ ವಿಷಯಗಳಲ್ಲಿ ಅಲೌಕಿಕ ವಿಷಯಗಳಲ್ಲಿಯೂ ಮುಖ್ಯವಾದದ್ದಾಗಿರುತ್ತದೆ. ಅಲೌಕಿಕ ವಿಷಯಗಳಲ್ಲಿ ಅಭಾವ ಪದಾರ್ಥ ಎಂದರೆ ಅನುಮಾನದಿಂದ ಇದೆ ಅಂತ ತಿಳಿದರೂ ದೇಶ ಕಾಲ ಆಕಾರ ವಿಶಿಷ್ಟವಾಗಿ ತಿಳಿಯಲಿಲ್ಲ ಎಂದರ್ಥ. ಲೌಕಿಕ ವ್ಯವಹಾರದಲ್ಲಿಯೂ ಇಲ್ಲ ಎಂದರೆ ಆ ಪದಾರ್ಥವು ನಿರ್ದಿಷ್ಟ ಸಮಯದಲ್ಲಿ ಆ ಪ್ರದೇಶದಲ್ಲಿ ಸಿದ್ಧವಾದ ಆಕಾರದಿಂದ ಇಲ್ಲವೆಂದರ್ಥ. ಇದು ನಮ್ಮೆಲ್ಲರ ಅನುಭವದಲ್ಲಿದ್ದರೂ ನಮ್ಮ ತಿಳಿವಳಿಕೆ ಸ್ವರೂಪ ಮತ್ತು ಸ್ವಭಾವಗಳನ್ನು ವಿವೇಚಿಸದಿರುವುದರಿಂದ ನಮ್ಮಲ್ಲಿಲ್ಲದೆ ಇರುವುದನ್ನು ಇದೆಯೆಂದೂ ಇರುವುದನ್ನು ಇಲ್ಲವೆಂದು ತಿಳಿಯುತ್ತೇವೆ. ಇದನ್ನೇ ಅಜ್ಞಾನ, ಅಖ್ಯಾತಿ, ಮಿಥ್ಯಾಜ್ಞಾನ, ಇವೇ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ಬಗೆಯ ತಿಳಿವಳಿಕೆಯೇ ರಾಗ ದ್ವೇಷ ಮೋಹಗಳಿಗೆ ಕಾರಣವಾಗುತ್ತದೆ. ನಮ್ಮ ಅನುಭವದಲ್ಲಿಯೇ ಅನೇಕ ಭಾವನೆಗಳು ಉದ್ರಿಕ್ತವಾಗಿ ಸ್ವಲ್ಪಕಾಲ ವಿದ್ದು ತಿರುಗಿ ಸೂಕ್ಷ್ಮವಾಗಿ ಅಭಾವ ರೂಪವನ್ನು ಪಡೆಯುತ್ತವೆ. ಆಗ ಈ ಭಾವನೆಗಳು ಸಂಸ್ಕಾರ ರೂಪದಿಂದೆದ್ದು ಕಾಲಾಂತರದಲ್ಲಿಯೋ ದೇಶಾಂತರದಲ್ಲಿಯೋ ಅಭಿವ್ಯಕ್ತವಾಗುವುದು ನಮ್ಮೆಲ್ಲರ ಅನುಭವದಲ್ಲಿದೆ. (ಮುಂದುವರಿಯುವುದು)

# ಮರಳಿ ಬಂದ ಸೌಭಾಗ್ಯ

ಲೇಖಕಿ—ಶ್ರೀಮತಿ ಬಿ.ಎಸ್. ಜಯಾಶಂಕರ್

ಇಲ್ಲಿಯವರೆಗೆ.... .... ....

ಚಂಗ್ರಪ್ಪನವರ ಒಬ್ಬನೇ ಮಗ ಮೋಹನ್ ರಾಷ್ಟ್ರಕ್ಕಾಗಿ ಸೇವೆ ಸಲ್ಲಿಸ ಬೇಕೆಂಬ ಉತ್ಕಟೇಚ್ಛೆಯುಳ್ಳ ಆದರ್ಶ ಮಿಲಿಟರಿ ಅಧಿಕಾರಿ. ತಂದೆಯ ಇಚ್ಛೆಯಂತೆ ವಿವಾಹಕ್ಕೆ ಸಮ್ಮತಿಸಿ, ಪ್ರೀತಿಯ ಉಷಾಳೊಂದಿಗೆ ಸರಳ ರೀತಿಯಲ್ಲಿ ವಿವಾಹ ಮಾಡಿಕೊಂಡನು. ತಂಗಿಯ ವಿವಾಹವನ್ನು ನೆರವೇರಿಸಿದ ಸಂತೋಷ ಸುಧೀರನಿಗಾದರೆ, ಸ್ನೇಹಿತನ ತಂಗಿಯ ವಿವಾಹ ನಿರ್ವಿಘ್ನವಾಗಿ ನೇರವೇ ರಿದ ಸಂತೋಷ ಸೋದರರಾದ ಶೇಖರ್ ವಿಜಯರಿಗಾಯಿತು. ವಿವಾಹ ನಂತರ ಮೋಹನ ಮಡದಿಯನ್ನು ಮನೆ ದ ಂ ಬಿ ಸಿ ಕೊಳ್ಳಲು ಮೈಸೂರಿ ಕಡೆಗೆ ಪ್ರಯಾಣ ಬೆಳಸಿದನು............

ತಮ್ಮ ಪ್ರೇಮದ ಪುತ್ರಿಯ ಅಗಲಿಕೆಯಿಂದ ಶರೀರವೇ ಜಡವಾದಂತೆ ಪಾರ್ವತಮ್ಮನವರಿಗೆ ಅನಿಸಿತು. ತನ್ನ ಮಾತಿನ ಮೋಡಿಯಿಂದ ಮನೆಯನ್ನು ಬೆಳಗುತ್ತಿದ್ದ ಒಬ್ಬಳೇ ತಂಗಿ ಉಷೆಯನ್ನು ಬೀಳ್ಕೊಟ್ಟಾಗ ತನಗರಿವಿಲ್ಲದೆ ವಿಜಯನ ಕಣ್ಣಗಳಲ್ಲಿ ಕಂಬನಿ ತುಂಬಿತ್ತು.

ಆದರೆ ತಂಗಿಯ ಬಾಳು ಪೂರ್ಣವಾಗಿತ್ತು, ಅವಳ ಸಂತೋಷವೇ ತನ್ನ ಸಂತೋಷ, ಎಂದು ತಿಳಿದು ಅವಳ ಆಸೆಗಳನ್ನು ತನ್ನ ಕೈಲಾದಷ್ಟು ಪೂರೈಸಿದ್ದ. ತಂದೆ ಇಲ್ಲದ ಕೊರತೆ ಬರದಂತೆ, ನೋಡಿಕೊಂಡಿದ್ದ. ಇಂದು ಅವನ ಮನಸ್ಸಿಗೆ ನೆಮ್ಮದಿ ದೊರಕಿತ್ತು. ಕಾರಣ ತಂಗಿಯ ಬಾಳಿಗೆ ಸುಭದ್ರತೆಯ ತಾಣ ಸಿಕ್ಕಿ, ತಾನು ಧನ್ಯನಾದೆ ಎಂದು ಭಾವಿಸಿದ ಸುಧೀರ್, ತಂದೆಯ ಫೋಟೋದ ಬಳಿ ನಿಂತು, ತಲೆಬಾಗಿ ನಮಿಸಿದ.

ಎರಡು ದಿನವಿದ್ದು ವಿಜಯ ಗೆಳೆಯನಿಂದ, ಬೀಳ್ಕೊಂಡು ತನ್ನ ಊರಾದ ರಾಮನಗರಕ್ಕೆ ಪ್ರಯಾಣಮಾಡಿದ.

ವಿಜಯನ ಕುಟುಂಬ ದೊಡ್ಡದು, ಅವನ ತಂಗಿಯರು ನಾಲ್ಕು ಮಂದಿ, ತಮ್ಮಂದಿರು ಮೂವರು, ಅವರಲ್ಲಿ ಹಿರಿಯ ಮಗನೇ ವಿಜಯ. ಅ ಣ್ಣ ನ ನ್ನು

ಕಂಡರೆ ಎಲ್ಲರಿಗೂ ಬಹಳ ಪ್ರೀತಿ. ಅವರನ್ನು ಕಂಡರೆ ಅವನಿಗೂ ಬಹಳ ಅಕ್ಕರೆ. ಮೊದಲನೆಯ ತಮ್ಮ ಪ್ರಭುದೇವ, ಮೈಸೂರಿನ ಸುತ್ತೂರು ಹಾಸ್ಟೆಲಿನಲ್ಲಿ ಓದುತ್ತಿದ್ದ. ಎರಡನೆಯವ ಶೇಖರ್, P.U.C ವ್ಯಾಸಂಗ ಮಾಡುತ್ತಿದ್ದ. ಮೂರನೆಯ ಸಹೋದರ ಜಗದೀಶ್, ಜಯಚಾಮರಾ ಜೇಂದ್ರ ವೃತ್ತಿ ಶಿಕ್ಷಣ ಶಾಲೆಯಲ್ಲಿ ಟ್ರೈನಿಂಗ್‌ಗೆ ಸೇರಿದ್ದ, ತಂಗಿಯರಲ್ಲಿ ಉಮಾ ಹಿರಿಯಳು, S.S.L.C. ಮುಗಿಸಿ, ತಾಯಿಯ ಕೆಲಸದಲ್ಲಿ ನೆರವಾಗುತ್ತಿದ್ದಳು. ಉಳಿದವರು ಪ್ರೈಮರಿ ಮಿಡ್ಲ್‌ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿದ್ದರು. ವಿಜಯನ ತಂದೆ ಕಛೇರಿಯಲ್ಲಿ ಕ್ಲರ್ಕ್‌ಕೆಲಸದಲ್ಲಿದ್ದರು. ವಿದ್ಯಾಭ್ಯಾಸದಲ್ಲಿ ನಿರತರಾಗಿದ್ದ ಮಕ್ಕಳ ಫೀಸ್, ಪುಸ್ತಕ, ವಗೈರೆಗೆ ಹಣವೇ ಸಾಕಾಗುತ್ತಿರಲಿಲ್ಲ. ಜೊತೆಗೆ ಸಂಸಾರದ ಭಾರ ಸಾಕಷ್ಟಿತ್ತು. ತಾಯಿ ಶ್ರೀದೇವಿಯ ಪಾಡು ಹೇಳತೀರದು. ಅವರು ಜೀವನ ದಲ್ಲಿ ಬಹಳ ನೊಂದವರು. ಕಾರಣ ಏಳುಮಂದಿ ಮಕ್ಕಳು, ಬರುತ್ತಿದ್ದ ಸಂಬಳ ಕೇವಲ ಇಬ್ಬರ ಜೀವನ ನಿರ್ವಹಣೆಗೆ ಸಾಲುತ್ತಿತ್ತು. ಮಕ್ಕಳ ಕಾಲೇಜು ಫೀ, ಅಲ್ಪ ಸ್ವಲ್ಪ ಖರ್ಚಿಗೆ ಕಳುಹಿಸಿ ಉಳಿದ ಹಣ ಹೆಂಡತಿಯ ಕೈಯಲ್ಲಿ ಹಾಕುತ್ತಿದ್ದ ಪಶುಪ ತಯ್ಯ. ಆ ಹಣ 15 ದಿನಕ್ಕೂ ಸಾಕಾಗುತ್ತಿರಲಿಲ್ಲ. ಸಂಸಾರದ ಹೊಣೆಹೊತ್ತ ಶ್ರೀದೇವಮ್ಮ ಒದ್ದಾಡುತ್ತಿದಳು. ಹೆಣ್ಣು ಮಕ್ಕಳ ನೆರವಿನಿಂದ ಹಪ್ಪಳ, ಉಪ್ಪಿನ ಕಾಯಿ ಮಾಡಿ ಮಾರುತ್ತಿದ್ದಳು. ಸಂಜೆಯ ವೇಳೆ ಚಿಕ್ಕ ಮಕ್ಕಳಿಗೆ ಪಾಠ ಹೇಳು ತ್ತಿದ್ದಳು. ಸಾಮಾನಿನ ಬೆಲೆ ಗಗನಕ್ಕೇರಿರುವಾಗ ಹೇಗೆ ಮಾಡಿದರೂ ಸಾಲುತ್ತಿ ರಲಿಲ್ಲ. ಚಿಂತಾಗ್ರಸ್ತಳಾಗಿ ಒಂದೊಂದು ವೇಳೆ ಸುಮ್ಮನೆ ಕೂಡುತ್ತಿದ್ದಳು. ಸಾಲ ದಕ್ಕೆ ಸ್ವಭಾವತಃ ಮುಂಗೋಪಿ ತನ್ನ ಪತಿ, ಎಷ್ಟೇ ಒಳ್ಳೆಯತನವಿದ್ದರೂ 'ಮುನಿ ಎಲ್ಲವನ್ನೂ ನುಂಗಿ ಹಾಕಿತು,' ಎಂಬತೆ ಪಶುಪತಯ್ಯ ವರ್ತಿಸುತ್ತಿದ್ದರು. ಇವೆಲ್ಲಾ ಹೊಡೆತವನ್ನು ಮೂಗೆತ್ತಿನಂತೆ ಆಕೆ ಸಹಿಸಬೇಕಾಗಿತ್ತು.

ವಿಜಯ ರಜೆಯಲ್ಲಿ ಬಂದಾಗ ತಾಯಿಯ ಕಷ್ಟವನ್ನು ನೋಡಿ ಮರುಗು ತ್ತಿದ್ದ. ಅಮ್ಮಾ ಇನ್ನು ಸ್ವಲ್ಪ ದಿನ ಸೈರಿಸಿಕೋ, ಈ ವರ್ಷ ನನ್ನ ಓದು ಹೇಗೂ ಮುಗಿಯುತ್ತದೆ. ನೌಕರಿ ಹಿಡಿದ ನಂತರ ನಿನ್ನ ಭಾರವನ್ನು ಆದಷ್ಟೂ ಕಡಿಮೆ ಮಾಡುವೆ, ಎಂದು ಹೇಳುತ್ತಿದ್ದ. ಶ್ರೀದೇವಮ್ಮನ ವರ ಆಶಾಗೋಪುರ ಮಕ್ಕಳು. ನಾವಂತೂ ಈ ಬಡತನದ ಬವಣೆಯಲ್ಲಿ ಬೇಯು ಯುತ್ತಿದ್ದೇವೆ, ನಮ್ಮ ಮಕ್ಕಳಾದರೂ ವಿದ್ಯಾಭ್ಯಾಸ ಮುಗಿಸಿ, ಸಮಾಜದಲ್ಲಿ ಒಂದು ಉನ್ನತ ಸ್ಥಾನ ಪಡೆಯಲಿ, ಎನ್ನುವ ಆಸೆ ಅವರಿಗೆ, ಅದಕ್ಕೋಸ್ಕರ ಏನೇ ಕಷ್ಟ ಬಂದರೂ ಸಹಿಸುತ್ತಾ ಜೀವನವನ್ನು ಸಾಗಿಸುತ್ತಿದ್ದರು. ವಿಜಯನಿಗೂ ಮನೆ ಪರಿಸ್ಥಿತಿಯ ಅರಿವಿತ್ತು. ಅಂತೆಯೆ ಎಲ್ಲಾ ಆಕಾಂಕ್ಷೆಗಳನ್ನು ಬದಿಗೊತ್ತಿ, ಅತ್ಯಂತ

ಸರಳರೀತಿಯಲ್ಲಿ ವ್ಯವಹರಿಸುತ್ತಿದ್ದ. ಹೈಸ್ಕೂಲ್ ಹುಡುಗರಿಗೆ ಅವರುಗಳ ಮನೆಗ ಳಿಗೇ ಹೋಗಿ ಪಾಠ ಮಾಡುತ್ತಿದ್ದ. ತಂದೆಯವರು ಕಳುಹಿಸಿದ ಹಣ ಸಾಲುತ್ತಿ ರಲಿಲ್ಲ. ತಮ್ಮಂದಿರ ಹಾಗೂ ತನ್ನ ಇತರ ಖರ್ಚುಗಳನ್ನು, ಪಾಠದಿಂದ ಬರುವ ಅಲ್ಪ ಹಣದಿಂದ ತೂಗಿಸಿ ಕೊಂಡು ಹೋಗಬೇಕಾಗಿತ್ತು. ಆದಷ್ಟು ಬೇಗ ಉದ್ಯೋಗ ಹಿಡಿದು, ತನ್ನ ಮನೆಗೆ ನೆರವು ನೀಡಬೇಕೆಂದು ಅವನ ಆಸೆ. ಅದ ಕ್ಕೋಸ್ಕರ ಹಗಲೂ ರಾತ್ರಿಯೂ, ಚೆನ್ನಾಗಿ ಓದಿ ಪರೀಕ್ಷೆಯಲ್ಲಿ ಆದಷ್ಟೂ ಸರಿ ಯಾಗಿ ಉತ್ತರಿಸಿದ್ದ. ಪರೀಕ್ಷೆ ಮುಗಿಸಿಕೊಂಡು ಸ್ನೇಹಿತನ ತಂಗಿಯ ಮದುವೆಯಲ್ಲಿ ಭಾಗವಹಿಸಿ ನೇರವಾಗಿ ರಾಮನಗರಕ್ಕೆ ಬಂದ ಅಣ್ಣನನ್ನು ಕಂಡು ತಂಗಿಯರಿಗೆ ಆನಂದವಾಯಿತು, ಕಾರಣ ಅವನು ಹೇಗಾದರೂ ಮಾಡಿ ಕೊಂಚ ಹಣ ಉಳಿಸಿ ಹಣ್ಣು ಹೂವು ತರಲು ಮರೆಯುತ್ತಿಲಿಲ್ಲ. ಈ ಸಾರಿ ಗೆಳೆಯನು ಒತ್ತಾಯದಿಂದ ಒಂದು ಬುಟ್ಟಿಯ ತುಂಬಾ ತಿಂಡಿಯನ್ನು ತುಂಬಿಸಿ ಕಳುಹಿಸಿದ್ದ. ಅಂದು ತಂಗಿಯ ರಿಗೆ ಸಂತಸವೋ ಸಂತಸ. ಎಲ್ಲರಿಗೂ ತಿಂಡಿಯನ್ನು ಹಂಚಿಕೊಟ್ಟು. ಶ್ರಿದೇವಮ್ಮ ಮದುವೆಯ ವಿಷಯ ಮತ್ತು ಪಾರ್ವತಮ್ಮನವರ ಯೋಗಕ್ಷೇಮ ವಿಚಾರಿಸಿದರು. ಎಲ್ಲ ವನ್ನು ಸಂಕ್ಷೇಪವಾಗಿ ತಿಳಿಸಿದ. ವರನ ಸುಗುಣವನ್ನು ಹೊಗಳಿದ. ತಾಯಿಗೆ ಸಂತೋಷವಾಯಿತು. ಊಟ ಮಾಡಿ, ಪುಸ್ತಕ ಹಿಡಿದು ಓದುತ್ತಾ ಮಲಗಿದ್ದ ವಿಜಯಾ, ಸಂಜೆ ತಾಯಿ ಕೊಟ್ಟ ಕಾಫಿ ಕುಡಿದು, ಸುತ್ತಾಡಿ ಬರಲು ಊರ ಹತ್ತಿರವಿದ್ದ ಗುಡ್ಡದ ಬಳಿ ಹೊರಟ. ಸಾಮಾನ್ಯವಾಗಿ ಊರಿನಲ್ಲಿದ್ದಾಗಲೆಲ್ಲಾ ಗುಡ್ಡದ ಬಳಿ ಬಂದು ಕತ್ತಲಾಗುವವರೆಗೂ ಕುಳಿತ್ತಿದ್ದು ಹೋಗುವ ಅಭ್ಯಾಸವಿತ್ತು, ಹಾಗೂ ಏಕಾಂತವೇ ಹೆಚ್ಚು ಪ್ರಿಯಕರವಾಗಿತ್ತು. ತಾಯಿ ಮಗನಿಗೆ ಇಷ್ಟವಾದ, ತರಕಾರಿಗಳನ್ನು ಹಾಕಿ ಬಾತ್ ಅನ್ನವನ್ನು ಮಾಡಿದ್ದರು.

ವಿಜಯ 'ನಾಳೆ ಬೆಂಗಳೂರಿಗೆ ಹೋಗುತ್ತೇನೆ, ಪಾಠದ ಮನೆಗಳಿಗೆ ಹೆಚ್ಚು ದಿನ ರಜ ಕೊಟ್ಟರೆ ತೊಂದರೆಯಾಗುತ್ತದೆ, ಬೆಳ್ಳಿಗ್ಗೆಯೇ 7-30 ರ ಬಸ್ಸಿಗೆ ಹೋಗುವೆ, ಎಂದು ಹೇಳಿದ್ದ. ತಿರುಗಾಡಿ ಬಂದಿದ್ದ ಮಗನನ್ನು ಪಶುಪತಯ್ಯ ಪರೀಕ್ಷೆಯಲ್ಲಿ ಹೇಗೆ ಮಾಡಿರುವೆ? ಎಂದು ಕೇಳಿದರು. ಪರವಾಗಿಲ್ಲ ಚೆನ್ನಾಗಿ ಮಾಡಿದ್ದೇನೆ, ಎಂದ ವಿಜಯ. ಅವನ ಚಿಕ್ಕ ತಂಗಿಯರು ಅಣ್ಣನ ಮುಂದೆ ತಮ್ಮ ಬೇಡಿಕೆಯನ್ನು ಸಲ್ಲಿಸ ತೊಡಗಿದರು. ಒಬ್ಬಳು, ಅಣ್ಣಾ ನನಗೆ ಹೊಸ ಬಟ್ಟೆ ಹೊಲಿಸು ಎಂದರೆ; ಮತ್ತೊಬ್ಬಳು; ಅಣ್ಣಾ, ನನಗೆ ಟೇಪು ಸರ ತಂದು ಕೊಡು ಎನ್ನುತ್ತಿದಳು. ಮಕ್ಕಳ ಗಲಾಟೆ ಕೇಳಿ ಪಶುಪತಯ್ಯ 'ಏನು ಸುಮ್ಮನೆ ಕುಳಿತು ಓದಬಾರದೇ' ಎಂದು ಗದರಿಸಿದರು.

ವಿಜಯ ನನಗೆ ಕೆಲಸ ಸಿಕ್ಕ ಕೂಡಲೇ ನಿಮ್ಮ ಆಸೆಗಳನ್ನೆಲ್ಲಾ ಪೂರೈಸುವೆ,

ಈಗ ಊಟ ಮಾಡೋಣ ನಡೆಯಿರಿ, ಎಂದ. ಮಕ್ಕಳು ಸಂತೋಷದಿಂದ ಕ
ದಾಡುತ್ತಾ ಹೊರಟರು. ತಂಗಿಯರೊಂದಿಗೆ ಕುಳಿತು ಊಟಮಾಡುವುದು ಅ
ನಿಗೆ ಬಹಳ ಇಷ್ಟ. ಬೆಳಿಗ್ಗೆ ಬೇಗನೆ ಎದ್ದು, ಟಿಫನ್ ಮುಗಿಸಿಕೊಂಡು, ಬೆಂಗಳ
ರಿಗೆ ಹೊರಟ ವಿಜಯ.

ಹಾಸ್ಟೆಲಿನಲ್ಲಿದ್ದ ತನ್ನ ರೂಮಿನ ಬೀಗತೆಗೆದು ಏನಾದರೂ ಪೋಸ್ಟ್ ಇದೆಯೇನೋ
ಎಂದು ಗುಮನಿಸಿದ "ಖಾಯಂ ಕೆಲಸ ಸಿಕ್ಕುವವರೆಗೂ ಖಾಸಗಿ ವಿದ್ಯಾಸಂ
ಯಲ್ಲಿ ಈಗ ಸಧ್ಯಕ್ಕೆ ಕೆಲಸಕ್ಕೆ ಸೇರಿಕೋ, ಅಲ್ಲಿನ ಪ್ರಿನ್ಸಿಪಾಲ್ ನನ್ನ ಗ
ಯರು ಎಂದು ಅವನ ಪ್ರೊಫೆಸರ್ ಒಬ್ಬರು ಹೇಳಿ 'ಗಾಂಧಿ ಮೆಮೋರಿಯಲ
ಹೈಸ್ಕೂಲ್' ನಲ್ಲಿ ಹುದ್ದೆಗಳು ಖಾಲಿ ಇವೆ. ಅಪ್ಲಿಕೇಶನ್ ಹಾಕು, ನಾನ
ಅವರಿಗೆ ಹೇಳುತ್ತೇನೆ, ಎಂದಿದ್ದರು. ಅದರಂತೆ ವಿಜಯನೂ ಅಪ್ಲಿಕೇಶನ್ ಹಾಕಿ
ಅಂತೆಯೇ ಆ ದಿನವೇ ಸಂಜೆ 4 ಗಂಟೆಗೆ ಇಂಟರ್‌ವ್ಯೂಗೆ ಕರೆಬಂದಿತ್ತು.

ಬಟ್ಟೆ ಬದಲಿಸಿ, ಪಾಠದ ಮನೆಗಳಿಗೆ ಭೇಟಿಯಿತ್ತು, ಇಂಟರ್‌ವ್ಯೂನ
ಯಾವ ಪ್ರಶ್ನೆಗಳನ್ನು ಕೇಳಬಹುದೋ? ಎಂದು ಯೋಚಿಸುತ್ತಾ ಕೆಲವು ಪುಸ್ತ
ಗಳನ್ನು ತೆಗೆದು ಓದತೊಡಗಿದ. ನಂತರ ಊಟ ಮುಗಿಸಿ, ಟೈಂ ನೋಡಿದ.
ಗಂಟೆ ಆಗಿತ್ತು, ಮುಖ ತೊಳೆದ. ಅವನು ಹೋಗಬೇಕಾಗಿದ್ದ ಗಾಂಧಿಮೆಮೋ
ಯಲ್ ಹೈಸ್ಕೂಲಿಗೂ, ಹಾಸ್ಟೆಲಿಗೂ 2 ಮೈಲಿ ಅಂತರವಿತ್ತು. ನಡೆದೇ ಹೋಗಲ
ನಿರ್ಧರಿಸಿ ಹೊರಟ. ಅಷ್ಟರಲ್ಲಿ ಇವನಂತೆಯೇ ಇನ್ನೂ ಅನೇಕ ಅಭ್ಯರ್ಥಿಗಳು ಆಗಲೆ
ಬಂದು ಕುಳಿತಿದ್ದರು. ಅವರೆಲ್ಲರ ಮಧ್ಯೆ ತನಗೆ ಉದ್ಯೋಗ ಸಿಗಬಹುದೇ ? ಎಂದು
ಅವನಿಗೆ ಸಂಶಯವಾಯಿತು. ಆದರೆ ಪ್ರೊಫೆಸರ್ ಹೇಳಿದ ಭರವಸೆ ಸ್ವಲ್ಪ ಧೈರ್ಯ
ವನ್ನು ತಂದಿತ್ತು. ಆ ವೇಳೆಗೆ ಆ ಸಂಸ್ಥೆಯನ್ನು ನಡೆಸುತ್ತಿದ್ದ ಪ್ರಿನ್ಸಿಪಾಲ್
ಶ್ರೀ ವೆಂಕಟರಾಜು ಕಾರಿನಲ್ಲಿ ಬಂದಿಳಿದರು. ಎಲ್ಲರೂ ಗೌರವ ಸೂಚಿಸಿ ಎದ್ದು
ನಿಂತರು. ಜವಾನ ಬಂದು ಎಲ್ಲರ ಹೆಸರುಗಳನ್ನೂ ತೆಗೆದು ಕೊಂಡು ಹೋದ
ಅನಂತರ ಒಬ್ಬೊಬ್ಬರನ್ನಾಗಿ ಕರೆಯುತ್ತಿದ್ದ. ವಿಜಯ ತನ್ನ ಸರದಿ ಬಂದಾಗ
ಒಳಹೊಕ್ಕು ಸಂದರ್ಶಕರಿಗೆ ವಂದಿಸಿ ನಿಂತ.

ಅವರು, 'ನಿಮ್ಮ ಹೆಸರು ವಿಜಯ ಅಲ್ಲವೇ? ನಿಮ್ಮ ಪ್ರೊಫೆಸರ್ ಸುಂದರ ರಾಜು
ನನ್ನ ಆತ್ಮೀಯ ಗೆಳೆಯರು. ನಾವಿಬ್ಬರೂ ಒಟ್ಟಿಗೇ ಓದಿದವರು. ನಮ್ಮ ಗೆಳೆತನ
ಹಚ್ಚಹಸುರಾಗಿದೆ. ನೀವು ನಾಳೆಯಿಂದಲೇ ಡ್ಯೂಟಿಗೆ ಜಾಯಿನ್ ಆಗಿರಿ. ನಮ್ಮ
ಸಂಸ್ಥೆಗೆ ನಿಮ್ಮಂತಹ ಪ್ರತಿಭಾವಂತರೇ ಬೇಕು' ಎಂದರು. ಒಂದು ಚೀಟಿಯನ್ನಿತ್ತು

ನ್ನು ಅಸಿಸ್ಟೆಂಟನ್ನು ಕಾಣಲು ತಿಳಿಸಿದರು. ಕೇವಲ 5 ಸೀಟುಗಳಿಗೆ 200ಕ್ಕೂ ಹೆಚ್ಚು ಮಂದಿ ಅಭ್ಯರ್ಥಿಗಳು ಬಂದಿದ್ದರು· ಅಸಿಸ್ಟೆಂಟರನ್ನು ಕಂಡು ಚೀಟಿಯನ್ನಿತ್ತ ವಿಜಯ, ಅವರು ಕೆಲಸದ ವೇಳೆ ಹಾಗೂ ಸಂಬಳದ ನಿಗಧಿಯನ್ನು ತಿಳಿಸಿದರು. ಸದ್ಯಕ್ಕೆ ಇಷ್ಟಾದರೂ ನೆರವು ಸಿಕ್ಕಿತಲ್ಲಾ ಎಂದು ಸಮಾಧಾನವಾಯಿತು. ನಾಳೆಯಿಂದ ಕೆಲಸಕ್ಕೆ ಹಾಜರಾಗುತ್ತೇನೆಂದು ತಿಳಿಸಿ ಹೊರಟ. ಮನದಲ್ಲಿ ಪ್ರೊಫೆಸರ್‌ರವರನ್ನು ವಂದಿಸಲು ಮರೆಯಲಿಲ್ಲ.

ರೂಮಿಗೆ ಹಿಂತಿರುಗುವಷ್ಟರಲ್ಲಿ ಶೇಖರ್ ಅಣ್ಣನಿಗಾಗಿ ಕಾಯುತ್ತಿದ್ದ. ಅವನನ್ನು ನೋಡಿ ವಿಜಯ, 'ಇಷ್ಟು ದಿನ ಏನು ಮಾಡುತ್ತಿದ್ದೆ, ಮೊದಲೇ ಬರಬಾರದಿತ್ತೆ ಎಂದ. ಏನಣ್ಣ ಮಾಡುವುದು, ಅ ವ ರು ಬಲವಂತದಿಂದ ಇರಿಸಿಕೊಂಡರು, ಈ ದಿನ ಗಲಾಟೆ ಮಾಡಿ ಹೊರಟು ಬರಬೇಕಾಯಿತು' ಎಂದ ಶೇಖರ್. ತನ್ನಣ್ಣನಿಗೆ ಸಿಕ್ಕ ಕೆಲಸದ ವಿಷಯ ತಿಳಿದು ಶೇಖರನಿಗೆ ಸಂತೋಷವಾಯಿತು. ಸಂಬಳದ ವಿಷಯ ಕೇಳಲು ಸದ್ಯಕ್ಕೆ 350. ರೂ ಕೊಡುತ್ತಾರೆ, ಎಂದು ತಿಳಿಸಿದ ವಿಜಯ. ನೂರಾರು ಮಂದಿ ಪದವೀಧರರು ಕೆಲಸವಿಲ್ಲದೆ ಅಲೆಯುತ್ತಿರುವಾಗ ಇಷ್ಟಾದರೂ ನೆರವು ಸಿಕ್ಕಿತಲ್ಲ ಎಂದು ಸಂತೋಷಪಟ್ಟ.

ಬೆಳಿಗ್ಗೆ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ತಮ್ಮನನ್ನು ಎಬ್ಬಿಸಿದ. ಟಿಫನ್‌ಗೆ ಮಾತ್ರ ವಿಜಯನ ಬಳಿ ಹಣವಿತ್ತು. ಟಿಫನ್ ಮುಗಿಸಿ ರೂಮಿಗೆ ಬಂದರು. ನಾನು ಪಾಠದ ಮನೆಗಳಿಗೆ ಹೋಗಿ ನಂತರ ನಡೆದೇ ಶಾಲೆಗೆ ಹೋಗಬೇಕಾಗಿದೆ ಹೊರಡುತ್ತೇನೆ ಎಂದ. ಅಣ್ಣನಿಗೆ ಶೇಖರ 20 ರೂ ತೆಗೆದು ಅ ಣ್ಣ ನ ಜೇಬಿಗೆ ಹಾಕಿದ. ಎಲ್ಲಿಂದ ಬಂತು ಈ ಹಣ, ಯಾರು ಕೊಟ್ಟರು, ಎಂದು ಕೇಳಿದ ವಿಜಯ. ನಾನು ಎಷ್ಟು ಬೇಡವೆಂದರೂ ಕೇಳದೆ ಮೋಹನ್, ಒತ್ತಾಯದಿಂದ ಟಿಕೆಟ್ ತೆಗೆದುಕೊಟ್ಟು, ಈ ಹಣವನ್ನು ಕೊಟ್ಟರು. ಅವರ ವಾತ್ಸಲ್ಯಕ್ಕೆ ಮಣಿಯ ಬೇಕಾಯಿತು; ಎಂದ ಶೇಖರ್, "ಆಗುವುದೆಲ್ಲಾ ಒಳ್ಳೆಯದಕ್ಕೇ ಎಂದು ಕೊಂಡು ಹೊರಟ ವಿಜಯ"

ಸಂಜೆ ಅಣ್ಣನು ಬರುವುದನ್ನೇ ಎದರು ನೋಡುತ್ತಿದ್ದ ಶೇಖರ. ಹಾಸ್ಟೆಲ್ ರಜವಿದ್ದುದರಿಂದ ಊಟ ನಿಲ್ಲಿಸಲಾಗಿತ್ತು. ಅ ಣ್ಣ ನ ಜೊತೆಯಲ್ಲಿ ಹೋಗುತ್ತಾ, ದಾರಿಯಲ್ಲಿ ಇನ್ನು ಒಂದು ತಿಂಗಳೊಳಗೆ ಹಾಸ್ಟಲ್ ಬಿಡಬೇಕಾಗುತ್ತದೆ, ಅಷ್ಟರೊ ಳಗೆ ರೂಂ ಮಾಡಬೇಕು. ಈ ಬೆಂಗಳೂರಿನಲ್ಲಿ ಮನೆಹುಡುಕುವುದೆಂದರೆ ದೊಡ್ಡ ಸಾಹಸ. ನೂರಾರು ರೂಗಳನ್ನು ಅಡ್ವಾನ್ಸ್ ಕೊಡಬೇಕು, ಎಂದ ವಿಜಯ. ಶೇಖರ ನಿಗೂ ಅದರ ಅರಿವಿತ್ತು. ಅಡ್ವಾನ್ಸ್ ಕೊಟರೂ ಒಂದು ಯೋಗವನ್ನೇ ಮಾಡಿ ದಷ್ಟು ಕಷ್ಟ ಎಂದುಕೊಂಡು 'ಹೋಟೆಲ್ ಪ್ರಕಾಶ್' ಒಳಹೊಕ್ಕು ಊಟಕ್ಕೆ ಆರ್ಡರ್ ಕೊಟ್ಟು ಕುಳಿತರು.

ಸ್ವಲ್ಪ ಹೊತ್ತಿನ ನಂತರ, ವಿಜಯನ ಫ್ರೆಂಡ್, ಸದಾನಂದ ಲೆದರ್ ಬ್ಯಾಗ್ ಹಿಡಿದು ಬಂದ. ಇವರನ್ನು ನೋಡಿ ತಾನೂ ಅಲ್ಲಿಯೇ ಬಂದು ಕುಳಿತ. 'ಇದೇನ ಊರಿಗೆ ಹೊರಟಂತಿದೆ?' ಎಂದ ವಿಜಯ.

ನನಗೆ ಶಿವಮೊಗ್ಗಕ್ಕೆ ವರ್ಗವಾಗಿದೆ, ನಾಳೆಯ ದಿನವೇ ನಾನು ಡ್ಯೂಟಿ ಜಾಯಿನ್ ಆಗಬೇಕು ಎಂದು ಹೇಳಿದ, ಸದಾನಂದ. ನಿಮಗೇನಾದರೂ ಶಿವಮೊಗ್ಗ ದಲ್ಲಿ ಪರಿಚಯದವರಿರುವರೇ? ಸ್ವಲ್ಪಕಾಲ ಸ್ಥಳಾವಕಾಶ ಕೊಟ್ಟರೆ ನಂತರ ನಾನು ಬೇರೆ ಏರ್ಪಾಟು ಮಾಡಿಕೊಳ್ಳುತ್ತೇನೆ ಎಂದ ಸದಾನಂದ. ವಿಜಯನಿಗೆ ಕೂಡಲೆ ತನ್ನ ಗೆಳೆಯನ ನೆನಪಾಯಿತು. ಸುಧೀರನ ವಿಳಾಸ ಕೊಟ್ಟು, ಚೀಟಿಯಲ್ಲಿ ಸದಾ ನಂದನಿಗೆ ನೆರವಾಗಲು ತಿಳಿಸಿದ್ದ.

ಆಗ ಶೇಖರನು, ಸದಾನಂದನ ರೂಮು ತೆರವಾಗುತ್ತದಲ್ಲ, ನಾವೇಕೆ ಪ್ರಯತ್ನ ಮಾಡಬಾರದು ಎಂದೆನಿಸಿ, ನಿಮ್ಮ ರೂಮು ಖಾಲಿ ಮಾಡಿದ್ದೀರಾ? ಮಾಡಿದರೆ ಆ ರೂಮು ನಮಗೆ ಸಿಗುವುದೆ? ಎಂದು ಕೇಳಿದ. ನಾನು ಇನ್ನು ಎಂಟು ದಿವಸ ಗಳಲ್ಲಿ ಖಾಲಿ ಮಾಡುತ್ತೇನೆ, ಅದನ್ನು ನಿಮಗೆ ಕೊಡಲು ಮನೆಯ ಮಾಲೀಕರಿಗೆ ಹೇಳುತ್ತೇನೆ. ಚಿಕ್ಕದಾದರೂ ರೂಮು ಚೊಕ್ಕವಾಗಿದೆ, ಮಾಲೀಕರೂ ಸಹ ಒಳ್ಳೆಯ ವರು ಎಂದ ಸದಾನಂದ.

ಬಸ್ಸಿಗೆ ವೇಳೆಯಾಯಿತೆಂದು ಹೊರಟ ಸದಾನಂದನಿಗೆ ಅಣ್ಣತಮ್ಮಂದಿರು ವಿದಾಯ ಹೇಳಿ, ರೂಮಿಗೆ ಹಿಂದಿರುಗಿದರು. ಬರುವಾಗ ಇದ್ದ ಚಿಂತೆ ಹೋಗು ವಾಗ ಇರಲಿಲ್ಲ. ಇದೇ ಸಮಯವೆಂದು ಅಣ್ಣನಿಗೆ ಹೇಳಿದ ಶೇಖರ. ಈ ದಿನ ಹೊಸ ಚಿತ್ರ "ಬಂಗಾರದ ಮನುಷ್ಯ" ರಿಲೀಸ್ ಆಗಿದೆ. ಹೋಗಿ ಬರೋಣ, ನೀನು ಸಹ ಹೋಗಿ ಬಹಳ ದಿನವಾಯಿತು ಅಂದ.

(ಮುಂದುವರಿಯುತ್ತದೆ)

---

ಮನುಷ್ಯನಲ್ಲಿ ಉಂಟಾಗುವ ವಿಚಾರಗಳು ಎರಡು ರೂಪವಾಗಿ ಹೊರ ಹೊಮ್ಮು ತ್ತವೆ. ಒಂದು ಕೃತಿಯಿಂದ ಮತ್ತೊಂದು ವಾಣಿಯಿಂದ. ಆದ್ದರಿಂದ ಮನುಷ್ಯ ಶುದ್ಧನಾದರೆ ಕೃತಿ ಮತ್ತು ವಾಣಿ ಎರಡೂ ಶುದ್ಧ. ಅಶುದ್ಧ ಮನಸ್ಸೇ ಬಂಧ ನಕ್ಕೆ ಕಾರಣ, ಶುದ್ಧ ಮನಸ್ಸೇ ಬಿಡುಗಡೆಗೆ ಸಾಧನ.

—ಶ್ರೀವಾಣಿ

# ಕಂಪ್ಯೂಟರ್‌ನ ಅದ್ಭುತಗಳು

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಕಂಪ್ಯೂಟರ್ ಎಂಬುದು ಒಂದು ಅದ್ಭುತ ಸಾಧನ. ಅದು ಮನುಷ್ಯರಂತೆ ನೋಡಬಲ್ಲದು, ಕೇಳಬಲ್ಲದು, ಯೋಚಿಸಬಲ್ಲದು, ಮಾತನಾಡಬಲ್ಲದು, ಕೆಲಸಮಾಡಬಲ್ಲದು. ಒಬ್ಬ ಚತುರ ಗಣಿತ ಶಾಸ್ತ್ರಜ್ಞನಿಗೆ ಬಿಡಿಸಲು ಹತ್ತು ವರ್ಷಕಾಲ ಹಿಡಿಯುವ ಸಮಸ್ಯೆಯನ್ನು ಎಲೆಕ್ಟ್ರಾನಿಕ್ "ಮೆದುಳು" ಒಂದು ಗಂಟೆಯಲ್ಲಿ ಬಿಡಿಸುತ್ತದೆ. 1000 ಜನರು ತಮ್ಮ ಜೀವಮಾನ ಕಾಲದಲ್ಲಿ ಮಾಡುವಷ್ಟು ಕೆಲಸವನ್ನು ಅದು ಒಂದು ದಿನದಲ್ಲಿ ಮಾಡಬಲ್ಲದು. ಕಾಗದ, ಲೇಖಣಿಯ ಲೆಕ್ಕಾಚಾರದಲ್ಲಿ 800 ವರ್ಷಗಳು ಹಿಡಿಯುವ ಪರಮಾಣು ಶಕ್ತಿ ಸಮಸ್ಯೆಗಳನ್ನು ಎರಡು ಗಂಟೆಗಳಲ್ಲಿ ಮುಗಿಸುತ್ತದೆ. "ಇಂಟರ್ ನ್ಯಾಷನಲ್ ಬಿಸ್‌ನೆಸ್" ಯಂತ್ರಕ್ಕೆ ಒಂದು ಸೆಕೆಂಡಿನಲ್ಲಿ 357,000 ಸಂಕಲನ, ವ್ಯವಕಲನ ಲೆಕ್ಕಗಳನ್ನೂ, 178,500 ಗುಣಾಕಾರ ಅಥವಾ 102,000 ಭಾಗಾಕಾರಗಳನ್ನು ಮಾಡಬಲ್ಲ ಸಾಮರ್ಥ್ಯವಿದೆ. "ಆರ್‌ಕಲ್" ಎಂಬ ಯಂತ್ರವು 12 ಅಂಕೆಗಳ ಸಂಖ್ಯೆಗಳನ್ನು 2000 ಸಾರಿ ಒಂದೇ ಸೆಕೆಂಡಿನಲ್ಲಿ ಗುಣಿಸಬಲ್ಲದು. ಒಂದು ಲಕ್ಷ ಸಮೀಕರಣಗಳನ್ನು (equations) ಒಂದು ನಿಮಿಷದಲ್ಲಿ ಬಿಡಿಸುತ್ತದೆ. ಗ್ಲಾಸ್ಗೋ ವಿಶ್ವವಿದ್ಯಾನಿಲಯದಲ್ಲಿರುವ 60,000 ಪೌಂಡ್ ಬೆಲೆ ಬಾಳುವ ಕಂಪ್ಯೂಟರ್, ಒಬ್ಬ ದಕ್ಷ ವಿದ್ವಾಂಸನಿಗೆ ಆರು ತಿಂಗಳು ಹಿಡಿಯುವ ಸಂಶೋಧನೆಯನ್ನು ಮೂರು ಗಂಟೆಗಳಲ್ಲಿ ಮುಗಿಸುತ್ತದೆ.

"ಟ್ಯೂಟರ್" ಎಂಬ ಕಂಪ್ಯೂಟರ್ ಕೈಗಾರಿಕಾ ಮತ್ತು ಸೈನಿಕ ಇಲಾಖೆಗಳಲ್ಲಿ ಪಾಠ ಹೇಳಿಕೊಡುತ್ತದೆ. ಶಿಕ್ಷಣ ಪಡೆಯುವವರ ಉತ್ತರಗಳಲ್ಲಿನ ತಪ್ಪುಗಳನ್ನು ತಿದ್ದಿ, ಅವರು ಸರಿ ಉತ್ತರಗಳನ್ನು ಕೊಡುವವರೆಗೂ ಅವರ ಪ್ರಗತಿಯ ದಾಖಲೆಗಳನ್ನೆಲ್ಲಾ ಮುದ್ರಿಸುತ್ತದೆ. ಉತ್ತರಗಳ ಹಂತ ಹಂತದ ಪ್ರಗತಿ, ಕಾಲಾವಧಿ ಮತ್ತು ವರ್ಗಗಳನ್ನು ತೋರಿಸುತ್ತದೆ. ರಷ್ಯಾ ದೇಶದಲ್ಲಿರುವ "ಯಾಂತ್ರಿಕ ವೈದ್ಯ" ಎಂಬ ಯಂತ್ರಕ್ಕೆ ನಾನಾ ಬಗೆಯ ರೋಗಗಳ 384 ಚಿಹ್ನೆಗಳನ್ನು ಬೇರೆ ಬೇರೆ ಸೂಚಿಸುವ 384 ಸ್ವಿಚ್‌ಗಳಿವೆ. ಯಾವ ವೈದ್ಯನಾಗಲಿ ತನ್ನ ರೋಗಿಯ ಚಿಹ್ನೆಗಳಿಗನುಸಾರವಾಗಿ ಸ್ವಿಚ್‌ಗಳನ್ನು ಒತ್ತಿದರೆ ಯಂತ್ರವು ಆ ರೋಗದ ಹೆಸರನ್ನೂ ಅದಕ್ಕೆ ತಕ್ಕ ಚಿಕಿತ್ಸೆಯನ್ನು ಕೂಡಲೆ ತಿಳಿಸುತ್ತದೆ. ಇಂಥ ಯಂತ್ರಗಳು ಇತರ ಕೆಲವು ಪಾಶ್ಚಾತ್ಯ ದೇಶಗಳಲ್ಲೂ ಇವೆ.

ನರ್ತನದಲ್ಲಿ ಭಾಗವಹಿಸುವ ಸ್ತ್ರೀ, ಪುರುಷರು ತಮ್ಮ ವಯಸ್ಸು ಶರೀರ ರಚನೆ, ಎತ್ತರ ಇಚ್ಛೆ, ಸ್ವಭಾವ ಮುಂತಾದ ವಿವರಗಳನ್ನು "ನರ್ತನ ಕಂಪ್ಯೂಟರ್" ಗೆ

ಕೊಟ್ಟರೆ, ಅದು ಹೊಂದಿಕೆಯಾಗುವ ಸಹಭಾಗಿಗಳನ್ನು ಗೊತ್ತುಮಾಡಿಕೊಡುತ್ತದೆ. "ಸಂಗೀತ ಕಂಪ್ಯೂಟರ್" ಸಂಗೀತ ಸ್ವರಗಳನ್ನು ಉತ್ಪತ್ತಿಮಾಡಿ, ಅವುಗಳನ್ನು ಬೆರಸಿ ಹೊಸಬಗೆಯ, ಗಾಯನವನ್ನು ನಿರ್ಮಿಸಿದೆ. ಒಂದು ಬಗೆಯ ಕಂಪ್ಯೂಟರ್ 50 ಮೈಲಿ ಎತ್ತರದಲ್ಲಿ ಹಾರಾಡುತ್ತಿರುವ ಶತ್ರು ವಿಮಾನವನ್ನು ಹೊಡೆಯಲು ರಾಕೆಟ್ಟನ್ನು ನಡೆಸುತ್ತದೆ. "ಬಂದೂಕ ಡೈರೆಕ್ಟರ್" ಎಂಬ ಕಂಪ್ಯೂಟರ್ 40 ಸಾವಿರ ಅಡಿ ಎತ್ತರದಲ್ಲಿ ಹಾರಾಡುತ್ತಿರುವ ವೈರಿ ವಿಮಾನವನ್ನು ಸಮುದ್ರದ ಅಲೆಗಳ ಮಧ್ಯೆ ಓಡಾಡುತ್ತಿರುವ ಹಡಗಿನಿಂದ ಗುರಿ ತಪ್ಪದಂತೆ ಫಿರಂಗಿಯಿಂದ ಹೊಡೆಯಬಲ್ಲದು.

ಸಾವಿರಾರು ಜನರ ಮಧ್ಯೆ ಬಂದ ಧ್ವನಿಯ ಮುಖ ಯಾರದ್ದೆಂದು ಕಂಪ್ಯೂಟರ್ ನಿಖರವಾಗಿ ಗುರುತಿಸುತ್ತದೆ. ಟೈಪ್‌ಮಾಡಿದ ಕಾಗದಗಳನ್ನು ಒಂದು ಸೆಕೆಂಡಿನಲ್ಲಿ 200 ಅಕ್ಷರಗಳಂತೆ ಭಾಷಾಂತರಮಾಡಬಲ್ಲದು. ತಥ್ಯವನ್ನೂ, ಲೆಕ್ಕತಾಳೆಯನ್ನೂ ತಪಾಸಣೆಮಾಡಬಲ್ಲದು. ಕ್ರಿ. ಪೂ. 4 ರಿಂದ ಕ್ರಿ. ಶ. 1957 ರವರೆಗಿನ ಚರಿತ್ರೆಯ ಮುಖ್ಯ ಸಂಗತಿಗಳನ್ನು ಹತ್ತು ಬೇರೆ ಬೇರೆ ಭಾಷೆಗಳಲ್ಲಿ ತಿಳಿಸಬಲ್ಲ ಒಂದು ಕಂಪ್ಯೂಟರ್ ಬ್ರಸಲ್ಸ್ ಪಟ್ಟಣದ ವಿಶ್ವಪ್ರದರ್ಶನದಲ್ಲಿ ಎಲ್ಲರನ್ನೂ ದಂಗುಬಡಿಸಿತು. ಕಂಪ್ಯೂಟರ್ ಟೆಲಿವಿಜನ್ ನಾಟಕಗಳನ್ನು ಬರೆಯುತ್ತದೆ. ವಿದೇಶಿ ಭಾಷೆಗಳನ್ನು ಅನುವಾದಿಸಿ 50 ಬೇರೆ ಬೇರೆ ಭಾಷೆಗಳಲ್ಲಿ ಟೈಪ್ ಮಾಡುತ್ತದೆ. ಇದರಿಂದ ಅಮೇರಿಕದ ಸೇನಾ ಅಧಿಕಾರಿಗಳು ತಾವರಿಯದ ವಿದೇಶೀ ಭಾಷೆಗಳಲ್ಲಿ ನಾನಾ ದೇಶಗಳಿಗೆ ಸಂದೇಶಗಳನ್ನು ಕಳುಹಿಸಬಲ್ಲರು.

ದೊಡ್ಡ ಕಂಪ್ಯೂಟರ್ ಒಂದು ಕೋಟಿ ಬೇರೆ ಬೇರೆ ವಿಷಯಗಳ ದಾಖಲೆಗಳನ್ನು ಇಟ್ಟುಕೊಳ್ಳುತ್ತದೆ. ಒಂದು ನಿಮಿಷದಲ್ಲಿ 60,000 ದಾಖಲೆಗಳನ್ನು ಪರಿಶೋಧಿಸಿ ಬೇಕಾಗಿರುವ ಸಂಗತಿಯನ್ನು ತಿಳಿಸುತ್ತದೆ. ಒಂದು ಪ್ರಶ್ನೆಗೆ ನಾಲ್ಕೈದು ಉತ್ತರಗಳಿದ್ದರೆ, ಯಾವುದು ಸರಿ ಎಂದು ಖಚಿತಮಾಡುತ್ತದೆ. ಅಮೇರಿಕದ ವ್ಯವಸಾಯ ಇಲಾಖೆಯ ಒಂದು ಯಂತ್ರವು 60,000 ಕಾಗದ ಪತ್ರಗಳನ್ನು ವಿಂಗಡಿಸಿ ಬೇಕಾದ ವಿಷಯಗಳನ್ನು ನಿಖರವಾಗಿ ತಿಳಿಸಲು ಒಂದು ನಿಮಿಷ ಮಾತ್ರ ತೆಗೆದುಕೊಳ್ಳುತ್ತದೆ. ದೆಹಲಿ ವಿಶ್ವವಿದ್ಯಾನಿಲಯದಲ್ಲೂ, ಕಾನ್‌ಪುರದ "ಭಾರತೀಯ ಔದ್ಯೋಗಿಕ-ಸಂಸ್ಥೆ" ಯಲ್ಲೂ ಇರುವ "ಎಲೆಕ್ಟ್ರಾನಿಕ್ ಮೆದುಳು" 40,000 ಬೇರೆ ಬೇರೆ ಸಂಗತಿಗಳನ್ನು ತನ್ನಲ್ಲಿಟ್ಟುಕೊಳ್ಳಬಲ್ಲದು. ಅದು ಬಹು ತೊಡಕಾದ ಲೆಕ್ಕಗಳಿಗೂ ಮಿಂಚಿನ ವೇಗದಲ್ಲಿ ಉತ್ತರ ಕೊಡುತ್ತದೆ. ಕಲ್ಕತ್ತದ ಭಾರತೀಯ ಸಂಖ್ಯಾ ಶಾಸ್ತ್ರ ( Statistical ) ಸಂಸ್ಥೆಯಲ್ಲಿ 28 ಲಕ್ಷ ರೂಪಾಯಿ ಬೆಲೆಯ "ಮೆದುಳು" ಇದೆ. ಕಂಪ್ಯೂಟರ್ 60,000 ಕಾರ್ಡುಗಳುಳ್ಳ 35 ಅಡಿ ಎತ್ತರದ

ರಾಶಿಯಲ್ಲಿರುವಷ್ಟು ವಿಷಯಗಳನ್ನು ಅರ್ಧ ಅಂಗುಲ ಟೇಪಿನ ರಾಟೆಯಲ್ಲಿ ಶೇಖರಿಸಿಡುತ್ತದೆ. ಒಂದು ಚಿಕ್ಕ ಮ್ಯಾಗ್ನೆಟಿಕ್ ಟೇಪ್, ಟೈಪ್‌ಮಾಡಿದ 900 ದೊಡ್ಡ ಶೀಟ್ ಕಾಗದಗಳಿರುವಷ್ಟು ಸಂಗತಿಗಳನ್ನು ಒಳಗೊಳ್ಳುತ್ತದೆ.

ಅಮೇರಿಕದ ಹಾರ್ವಾರ್ಡ್ ವಿಶ್ವವಿದ್ಯಾನಿಲಯ ಮತ್ತು ಮಸಾಚುಸೆಟ್ಸ್ ಔದ್ಯೋಗಿಕ ಸಂಸ್ಥೆಗಳಲ್ಲಿ "ವಿದ್ಯುತ್ ಕಣ್ಣು" ಮತ್ತು "ವಿದ್ಯುತ್ ಮೆದುಳು"ಗಳು ಬಾಹ್ಯಾಕಾಶದಲ್ಲಿರುವ ಉಪಗ್ರಹ ಪಥಗಳ ದೂರಗಳನ್ನು ಗೊತ್ತುಮಾಡುವುದಕ್ಕೂ, ಸೇತುವೆಗಳ ಲೆಕ್ಕಮಾಡುವುದಕ್ಕೂ, ಇತರ ಒತ್ತಡಗಳನ್ನು ನಿರ್ಣಯಿಸುವುದಕ್ಕೂ, ಅನೇಕ ಶಾಸ್ತ್ರೀಯ ಅನ್ವೇಷಣೆಗಳಿಗೂ ನೆರವಾಗಿವೆ. ಕಂಪ್ಯೂಟರ್ ಜಾನೇಷುಮಾರಿ ( Census ) ಲೆಕ್ಕದ ಅಗಾಧ ರಾಶಿಗಳನ್ನು ವಿಭಜಿಸುತ್ತದೆ. ಪಾರಿಭಾಷಿಕ ಗ್ರಂಥಗಳನ್ನು ಅನುವಾದ ಮಾಡುತ್ತದೆ. ಐತಿಹಾಸಿಕ ಗ್ರಂಥಗಳ ಕರ್ತೃ ಯಾರೆಂಬುದು ವಿವಾದ ಬಂದಾಗ, ಪದೇ ಪದೇ ಉಪಯೋಗಿಸಿದ ಶಬ್ದಗಳು ಎಷ್ಟು ಸಾರಿ ಬಂದಿವೆಯೆಂಬುದನ್ನು ಎಣಿಸಿ, ನಿಜವಾದ ಗ್ರಂಥಕರ್ತರಾರೆಂಬುದನ್ನು ನಿರ್ಣಯಿಸುತ್ತದೆ. ಮಾನಸಿಕ ರೋಗಿಯು ಉಪಯೋಗಿಸಿದ ಶಬ್ದಗಳು ವಿಭಜಿಸಲು ಮನಶ್ಶಾಸ್ತ್ರಜ್ಞರಿಗೆ ನೆರವಾಗುತ್ತದೆ. ಅಮೇರಿಕ ಸರ್ಕಾರದ ರಕ್ಷಣಾ ಇಲಾಖೆಯಲ್ಲಿರುವ 800 ಕ್ಕಿಂತಲೂ ಹೆಚ್ಚು ಕಂಪ್ಯೂಟರ್‌ಗಳನ್ನು ವಾಯು ಪಡೆಯ ಮುಖ್ಯ ಸ್ಥಳಗಳಲ್ಲಿಟ್ಟು ಇಡೀ ರಾಷ್ಟ್ರದಲ್ಲಿ ಹಾರಾಡುವ ಪ್ರತಿಯೊಂದು ವಿಮಾನದ ವಿವರಗಳನ್ನೂ ಪತ್ತೆಮಾಡುತ್ತದೆ.

ದ್ವಿತೀಯ ಜಾಗತಿಕ ಮಹಾಯುದ್ಧದ ಕಾಲದಲ್ಲಿ ನಾನಾ ಕಠಿಣ ಸೈನಿಕ ಸಮಸ್ಯೆಗಳನ್ನು ಬಗೆಹರಿಸಲು ಅನೇಕ ಲೆಕ್ಕ-ಯಂತ್ರಗಳು ಆವಿಷ್ಕರಿಸಲ್ಪಟ್ಟವು. ಅವುಗಳಲ್ಲ " ಈನಿಯಾಕ್ " ಎಂಬುದು ಪ್ರಚಂಡ ಕೌತುಕವಾಗಿತ್ತು. 18, 000 ನಿರ್ವಾತ ( ವ್ಯಾಕ್ಯೂಮ್ ) ಕೊಳವೆಗಳುಳ್ಳ ಆ ರಾಕ್ಷಸ ಕಂಪ್ಯೂಟರ್ ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದಲ್ಲಿ ಅಮೇರಿಕದ ಬಂದೂಕು ವಿಜ್ಞಾನ ಪ್ರಯೋಗಶಾಲೆಗೋಸ್ಕರ ನಿರ್ಮಿತವಾಯಿತು. ಅದೊಂದು ಗಣಿತ ಶಾಸ್ತ್ರದ ಪವಾಡ. ಗಣಿತ ತಜ್ಞರಿಗೂ ಅಸಾಧ್ಯವಾದ ಸಾಹಸಗಳನ್ನು ಈ ಯಂತ್ರವು ಮಂತ್ರವಾದಿಯಂತೆ ಮಿಂಚಿನ ವೇಗದಲ್ಲಿ ಪ್ರದರ್ಶಿಸಿ ಬೆರಗುಗೊಳಿಸುತ್ತದೆ. 16 ಅಂಗುಲ ವ್ಯಾಸದ ಸಿಡಿಗುಂಡನ್ನು ಹಾರಿಸಿದರೆ, ಅದರ ಪಥವನ್ನು ಯಂತ್ರವು ತಕ್ಷಣ ಬರೆದು ತೋರಿಸುತ್ತದೆ. ಗಾಳಿಯ ವೇಗ, ಭೂಮಿಯ ಗುರುತ್ವ, ಪೃಥ್ವಿಭ್ರಮಣ, ಅಲೆಗಳಿಂದಾಗುವ ಹಡಗಿನ ಉರುಳು, ಸ್ಫೋಟನದ ಶಕ್ತಿ ಮುಂತಾದ ಇತರ ಅನೇಕ ಸ್ಥಿತಿಗಳನ್ನೂ ಲೆಕ್ಕಮಾಡಿ ಕ್ಷಣಮಾತ್ರದಲ್ಲಿ ಉತ್ತರ ಕೊಡುತ್ತದೆ. ಮನೆಯಲ್ಲಿ ಬಿರುಗಾಳಿ–ಕಿಟಕಿಗಳನ್ನಿಟ್ಟರೆ 100 ವರ್ಷಗಳ ಕಾಲದಲ್ಲಿ ಸೌದೆ ಬಿಲ್ಲಿನಲ್ಲಿ ಆಗುವ ಉಳಿತಾಯವೆಷ್ಟು ಎಂಬ ಪ್ರಶ್ನೆಗೆ ಆ ಯಂತ್ರವು ಚಳಿಗಾಲದ ಸರಾಸರಿ ಉಷ್ಣಾಂಶ ಗಾಜುಗಳ ಚದರ, ಗಾಳಿ ಬೀಸುವ ದಿಕ್ಕು, ಹಿಂದಿನ ಸೌದೆ ಖರ್ಚು, ಬಿಸಿಮಾಡುವ

ಕ್ರಮ ಮುಂತಾದ ವಿವರಗಳನ್ನೆಲ್ಲಾ ಗುಣಿಸಿ ಕಾಲಜ್ಞಾನಿಯಂತೆ ಉತ್ತರಿಸುತ್ತದೆ.

ಅಮೇರಿಕದಲ್ಲಿ ಪ್ರತಿ ತಿಂಗಳೂ 5 ಲಕ್ಷ ಸರಕಿನ ಹಡಗುಗಳು ವಿದೇಶಗಳಿಗೆ ಹೋಗುತ್ತವೆ, 3500 ಬಗೆ ಜೀನಸುಗಳು 150 ದೇಶಗಳಿಗೆ ರಫ್ತಾಗುತ್ತವೆ. ನಾಲ್ಕು ಲಕ್ಷ ಸ್ಪಷ್ಟೀಕರಣಗಳ (declarations) ರಾಶಿಯು ಸುಂಕದ ಕಟ್ಟೆಯಲ್ಲಿ ಬೀಳುತ್ತದೆ. 60 ಸಾವಿರ ಕಾರ್ಡುಗಳು ನಾನಾ ಬಗೆಯ ಕೂಡಿಕೆಗಳಲ್ಲಿ ಸುಧಾರಿಸಲ್ಪಡಬೇಕು. ಅಮೇರಿಕದ ಜನಗಣತಿ ಇಲಾಖೆಯು ಪ್ರತಿ ತಿಂಗಳೂ ಅಷ್ಟು ಅಗಾಧ ಅಂಕೆ-ಸಂಖ್ಯೆಗಳ ವರದಿ ಪಟ್ಟಿಗಳನ್ನು ತಯಾರಿಸಬೇಕಾಗಿದೆ. ಇದಕ್ಕೆ ನೂರಾರು ಜನರು ದೀರ್ಘಕಾಲ ಬಹು ಕಠಿಣವಾಗಿ ಶ್ರಮಿಸಬೇಕಾಗಿತ್ತು. ಕಂಪ್ಯೂಟರ್ ಇವುಗಳನ್ನೆಲ್ಲಾ 37 ಗಂಟೆಗಳಲ್ಲಿ ಲಗು ಬಗೆಯಲ್ಲಿ ಮುಗಿಸುತ್ತದೆ. ಪ್ರತಿ ವರ್ಷದ ಐದು ಕೋಟಿ ವಿಮಾನ ಪ್ರವಾಸಿಗಳಿಗೆ ಸ್ಥಳಗಳನ್ನು ಕಾದಿಡುವುದು ವಿಮಾನ ಕಂಪೆನಿಗಳ ಸಿಬ್ಬಂದಿಗಳಿಗೆ ಅಸಾಧ್ಯ, ಅದನ್ನು ಕಂಪ್ಯೂಟರ್ ಯಾವ ತಂಟೆಯೂ ಇಲ್ಲದಂತೆ ಲೀಲಾಜಾಲವಾಗಿ ನಿರ್ವಹಿಸುತ್ತದೆ. ಅಮೇರಿಕದ ಅಂಚೆ ಇಲಾಖೆಯ ಕೋಟ್ಯಾನುಕೋಟಿ ಕಾಗದಗಳನ್ನು ಕಂಪ್ಯೂಟರ್ ವಿಂಗಡಿಸುತ್ತದೆ.

ಕಂಪ್ಯೂಟರ್ ಸುಂದರ ನಕಾಶೆ, ಮ್ಯಾಪುಗಳನ್ನು ಮುಗಿಸಿ, ಕಟ್ಟಡಗಳ ಲೆಕ್ಕಾಚಾರಗಳನ್ನು ಗುಣಿಸಿ ಕಟ್ಟಡಗಳ ಡಿಜೈನ್ ಮಾಡುತ್ತದೆ, ನೀರಿಲ್ಲದ ಪ್ರಾಂತ್ಯಗಳಲ್ಲಿ ಆಳವಾದ ಭಾವಿಗಳಲ್ಲೂ ನೀರು ಬಾರದಾಗ ನೀರಿನ ಗುಪ್ತ ಸ್ಥಾನವನ್ನು ಪತ್ತೆ ಹಿಡಿಯುತ್ತದೆ. ಭೂಗರ್ಭದಲ್ಲಿರುವ ಪೆಟ್ರೋಲಿಯಮ್ಮನ್ನು ತೋರಿಸಿ ಆ ಕ್ಷೇತ್ರಗಳ ಹತ್ತು ವರ್ಷದ ಭವಿಷ್ಯವನ್ನು ನುಡಿಯುತ್ತದೆ, "ಟೈಡ್ ಪ್ರಿಡಿಕ್ಟರ್'' ಎಂಬ ಯಂತ್ರವು ರೇವಿನಲ್ಲಿ ಇಡೀ ವರ್ಷದಲ್ಲಾಗುವ ಉಬ್ಬರವಿಳಿತಗಳ ನಕ್ಷೆಯನ್ನು ಬರೆಯುತ್ತದೆ. "ಸೈಕ್ಲೋನ್'' ಮತ್ತು "ಟೈಫೂನ್'' ಕಂಪ್ಯೂಟರ್‌ಗಳು ಮಾನವನಿಗೆ ತಿಳಿಯದ ಅನೇಕ ಹವಾಮಾನ ವಿವರಗಳನ್ನು ತಿಳಿಸುತ್ತದೆ. ಸಾವಿರಾರು ವಾಹನಗಳ ಓಡಾಟಗಳಲ್ಲಿ ಗೊಂದಲವಾಗದಂತೆ ಕಂಪ್ಯೂಟರ್ ನಿಯಂತ್ರಿಸುತ್ತದೆ; ವಿಪರೀತ ವಾಹನಗಳು ಒಂದೇ ದಿಕ್ಕಿನಲ್ಲಿ ಸೇರಿಸಿಕೊಂಡಿದ್ದರೆ, ಅವುಗಳು ಚದರಿ ಗದ್ದಲವಿಲ್ಲದೆ ಬೇರೆ ದಿಕ್ಕುಗಳಿಗೆ ಹೋಗುವಂತೆ ಸಿಗ್ನಲ್ ಮಾಡುತ್ತದೆ. ಗಂಟೆಗೆ 40,000 ಪ್ರತಿಗಳನ್ನು ತಯಾರಿಸುವ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಕಂಪ್ಯೂಟರ್ ಪದೇ ಪದೇ ಬಣ್ಣ, ಶಾಯಿಗಳನ್ನು ನಿಯಂತ್ರಿಸುತ್ತದೆ. ಎಲೆಕ್ಷನ್ ಪೂಲ್‌ಗಳಲ್ಲಿ ಮತದಾರರ ಸಮಸ್ತ ವಿಷಯಗಳನ್ನು ತಿಳಿಸುತ್ತದೆ. ದಿವಂಗತ ಪ್ರೆಸಿಡೆಂಟ್ ಕೆನೆಡಿಯವರ ಚುನಾವಣೆಯಲ್ಲಿ ಇದು ಬಹಳ ನೆರವಾಯಿತು. ಕಂಪ್ಯೂಟರ್ ಆಯುಧಗಳಿಂದ ಸೂಕ್ಷ್ಮವಾಗಿ ಕತ್ತರಿಸುತ್ತದೆ ಕೊರೆಯುತ್ತದೆ ವೆಲ್ಡ್ ಮಾಡುತ್ತದೆ. ಕೈಗಾರಿಕೆಗಳಲ್ಲಿ ಉಷ್ಣತೆ, ಒತ್ತಡ, ಪರಿಮಾಣ, ವೇಗಗಳನ್ನು ಅಂಕೆಯಲ್ಲಿಡುತ್ತದೆ, ನ್ಯೂಯಾರ್ಕಿನಲ್ಲಿ ಲಿಫ್ಟ್‌ಗಳನ್ನು ನಡೆಸುತ್ತಿದ್ದ 30,000 ಜನರಲ್ಲಿ ಈಗ ಒಬ್ಬನೂ ಇಲ್ಲದಂತೆ ಕೆಲಸಮಾಡಲು ಸಾಧ್ಯವಾಗಿದೆ; (ಸ್ವತಶ್ಚಾಲಕ ಕ್ರಮ ಬಂದಿದೆ) 150 ಜನರು ಕೆಲಸಮಾಡುತ್ತಿದ್ದ

ೋಕಿಯೋ ಪಟ್ಟಣದ ಕಾರ್ಖಾನೆಯೊಂದರಲ್ಲಿ ಈಗ ಇಬ್ಬರೇ ಹುಡುಗಿಯರು ವಸಕ್ಕೆ 100 ರೇಡಿಯೋಗಳನ್ನು ಕೂಡಿಸುತ್ತಾರೆ.

ಕಂಪ್ಯೂಟರ್ ಬುಕ್‌ಕೀಪಿಂಗ್, ಕ್ಯಾಷ್ ರಜಿಸ್ಟರ್, ಸಂಬಳದ ಚೆಕ್ಕುಗಳನ್ನು ರೆಯುತ್ತದೆ. ಬ್ಯಾಂಕುಗಳ ಕೋಟಿ ಕೋಟಿ ಚೆಕ್ಕುಗಳನ್ನು ಪರೀಕ್ಷಿಸುತ್ತದೆ. ದಾಯ ತೆರಿಗೆ ಕಾಗದಗಳ ತಪಾಸನೆ ಮಾಡುತ್ತದೆ. ವರ್ತಕ ಮಂಡಲಿಗಳಿಗೆ ರೀದಿ ಮಾಡಲು ಉತ್ತಮ ಕಾಲವಾವುದೆಂದು ತಿಳಿಸುತ್ತದೆ. ಭಾಷಣಗಳನ್ನು ುದ್ರಿಸುತ್ತದೆ. ರೇಡಿಯೋ ಟೆಲಿಫೋನ್ ಭಾಷಣಗಳನ್ನು ಬರೆಯುತ್ತದೆ. ಟೆಲಿ ್ರಿಂಟರ್ ದೂರದೇಶಗಳಿಂದ ಬರುವ ಸಮಾಚಾರಗಳನ್ನು ಅಚ್ಚು ಹಾಕುತ್ತದೆ. ್ಲೈ ನಿಲ್ದಾಣಗಳಲ್ಲಿ ಮುಂದಿನ ರೈಲು ಎಲ್ಲಿಗೆ ಯಾವಾಗ ಹೊರಡುವುದು ಮುಂತಾ ುವನ್ನು ಪ್ರವಾಸಿಗಳಿಗೆ ಸೂಚಿಸುತ್ತದೆ. ಸ್ವಯಂಚಾಲಿತ ಟೆಲಿಫೋನಿನಲ್ಲಿ ಯಂತ್ರವು ು ಹುದೂರದಲ್ಲಿರುವ ಟೆಲಿಫೋನಿನ ಡಯಲ್ ಸಂಖ್ಯೆಗಳನ್ನು ುಗಿಸಿ ಅಲ್ಲಿರುವ ವ್ಯಕ್ತಿಯೊಡನೆ ಸಂಪರ್ಕ ಕೊಡುತ್ತದೆ. ಸಾವಿರಾರು ಮೈಲಿ ಳಾಚೆ ಇರುವ ಮೂವತ್ತೈದು ಕೋಟಿ ಸಂಖ್ಯೆಗಳಲ್ಲಿ ತನಗೆ ಬೇಕಾದ ಸಂಖ್ಯೆ ುನ್ನು ಕೆಲವು ಸೆಕೆಂಡುಗಳಲ್ಲಿ ಹಿಡಿಯುತ್ತದೆ. ಯಂತ್ರವು ಆಲೈಸುತ್ತದೆ; ನೆನಪ ಲ್ಲಿಡುತ್ತದೆ; ತಪ್ಪುಮಾಡಿದರೆ ತಿದ್ದಿಕೊಳ್ಳುತ್ತದೆ. ಟೆಲಿಫೋನ್ ಮಾಡಿದಾಗ ಯಜ ಮಾನನಿಲ್ಲದಿದ್ದರೆ ಈ ಯಂತ್ರವು ಮಾತುಗಳನ್ನೆಲ್ಲ ತಾನೇ ಬರೆದುಕೊಂಡು ಅವನು ುಂದಾಗ ಕೊಡುತ್ತದೆ.

# " ಶಿಕ್ಷಣದಲ್ಲಿ ಬಸವ ಧರ್ಮ "

ಪೂಜ್ಯವಾಣಿ

ನಮ್ಮದು ಅತ್ಯಧಿಕ ಬಡತನ ಹೊಂದಿದ ಪ್ರಜಾಪ್ರಭುತ್ವ ದೇಶ. ಈ ದೇಶ ಶಿಕ್ಷಣ ರಂಗ ಬಡತನವನ್ನೇ ಮೈಗೂಡಿಸಿ ಕೊಂಡಿದೆ ಎಂದರೆ ಅತಿಶಯೋಕ್ತಿಯಲ್ಲ ಕೆಲವು ಪಟ್ಟಭದ್ರ ಹಿತಾಸಕ್ತಿಯುಳ್ಳ ಬಂಡವಾಳ ಶಾಹಿ, ವಿ ವೇ ಚ ನಾ ರಹಿ ಧುರೀಣರಿಂದಾಗಿ ದೇಶದ ಅಭ್ಯುದಯ ಮೂಲವಾದ ಶಿಕ್ಷಣ ರಂಗ ರೋಗ ಪೀಡಿ ವಾಗಿದೆ. ಸ್ವಾತಂತ್ರ್ಯೋತ್ತರದ ರಾಜಕೀಯದ ಅಸ್ಥಿರತೆಯಿಂದ ದೇಶದ ಪ್ರಗತಿ ಬದಲು ನಾನಾ ಸಮಸ್ಯೆಗಳು ತಲೆದೋರಿವೆ. ಈ ಸಮಸ್ಯೆಗೆ ಕಾರಣವಾದ ಇಂದಿನ ಬ್ರಿಟೀಷ್ ಮಾದರಿ ಶಿಕ್ಷಣ ಪದ್ಧತಿಯನ್ನು ತ್ಯಜಿಸಿ, ನಮ್ಮ ದೇಶದ ಸ್ಥಿತಿಗತಿ, ಆಚಾರ –ವಿಚಾರ, ಸಂಸ್ಕೃತಿ–ಪರಂಪರೆಗೆ ಅನುಗುಣವಾಗಿ ಆಮೂಲಾಗ್ರ ಬದಲಾವಣೆಯನ್ನು ಶಿಕ್ಷಣ ರಂಗದಲ್ಲಿ ತೀವ್ರವಾಗಿ ಕೈಗೊಳ್ಳಬೇಕು. ರಾಜಕೀಯ ಪ್ರವೇಶಕ್ಕೆ ಅವಕಾಶ ಕೊಡದೆ; ಜನತೆ, ಸರ್ಕಾರ, ವಿಶ್ವವಿದ್ಯಾನಿಲಯಗಳು ಪರಿಷತ್ತುಗಳು ಇನ್ನಿತರ ಸಂಘ ಸಂಸ್ಥೆಗಳು ಪ್ರಾಮಾಣಿಕ ಪ್ರಯತ್ನಮಾಡಿದರೆ ಮುನ್ನಡೆ ಸುಲಭ ಸಾಧ್ಯ. ಶಿಕ್ಷಣ ಪದ್ಧತಿಯನ್ನು ಬದಲಿಸಬೇಕೆಂಬ ಕೂಗು ಬಹುದಿನಗಳಿಂದ ಬಗೆಹರಿಯದ ಪ್ರಶ್ನೆ ಯಾಗಿಯೇ ಉಳಿದಿದೆ. ನಮ್ಮಲ್ಲಿ ತಜ್ಞರಿಗೇನು ಕೊರತೆ ಇಲ್ಲ. ರಾಜಕೀಯಕ್ಕೆ ಮಹತ್ವಕೊಡದೆ, ಅಪರ ಪ್ರತಿಭೆಗೆ ಪುರಸ್ಕಾರ ಕೊಟ್ಟು ಈಗಲಾದರೂ ಈ ದಿಸೆ ಯಲ್ಲಿ ಆಸ್ಥೆ ವಹಿಸುವುದು ಅತ್ಯಾವಶ್ಯಕ.

ಅಪೇಕ್ಷಿತ ವೃತ್ತಿ ಮೂಲ ಶಿಕ್ಷಣ ಪದ್ಧತಿಯಲ್ಲಿ ದೇಶದ ಹಾಗು ಜನತೆಯ ಸರ್ವಾಂಗೀಣ ಹಿತದೃಷ್ಟಿಯಿಂದ ಬಸವಧರ್ಮ ಅಳವಡಿಸುವುದು ಸಕಾಲಿಕ. ‹‹ಬಸವ ಧರ್ಮ ವಿಶ್ವಧರ್ಮ''. ಸಕಲ ಮಾನವೀಯ ಲಕ್ಷಣಗಳನ್ನೊಳಗೊಂಡ ಈ ಧರ್ಮದ ತತ್ವಗಳು ದೇಶವನ್ನು ಸಮರ್ಥವಾಗಿ ಬಲಪಡಿಸುವುದರಲ್ಲಿ ಮಹತ್ವದ ಪಾತ್ರವಹಿ ಸುತ್ತವೆ. ಸರಕಾರ, ಜನತೆ ಅದರಲ್ಲೂ ವೀರಶೈವ ಶಿಕ್ಷಣ ಸಂಸ್ಥೆಗಳು, ಮಠಾಧಿ ಪತಿಗಳು ಒಂದುಗೂಡಿ ಶಿಕ್ಷಣದಲ್ಲಿ ಬಸವಧರ್ಮವನ್ನು ಅಳವಡಿಸುವುದರತ್ತ ವಿಳಂಬಿ ಸದೆ ಆದ್ಯಗಮನ ನೀಡುವುದಗತ್ಯ.

ವಿ. ಸೂ. : 'ಬಸವಧರ್ಮ' ಪದವನ್ನು ಇಲ್ಲಿ 'ಬಸವ ತಾತ್ತ್ವಿಕ ದರ್ಶನದ' ಅರ್ಥದಲ್ಲಿ ಬಳಸಿದೆಯೇ ವಿನಃ ಜಾತೀಯ ಸಂಕುಚಿತ ದೃಷ್ಟಿಯಿಂದಲ್ಲ.

—ಭಾಲ್ಕಿಯ ಹಿರೇಮಠದ ಪೂಜ್ಯ ಶ್ರೀ ಚನ್ನಬಸವಪಟ್ಟದೇವರು, ಬೀದರ ಜಿಲ್ಲೆ.

# 'ವಿಜಯನಗರದ ಸ್ಥಾಪನೆಯಲ್ಲಿ ಲಿಂಗಧರ್ಮದ ಪಾತ್ರ"

—ವೇದ ವೇದಾಂತ ವಿದ್ಯಾವಾಚಸ್ಪತಿ ದಿ|| ಶ್ರೀ ಟಿ. ಎಸ್. ಮಲ್ಲಪ್ಪ

ಹರಿಹರ ಗುರುವಿನದು ದಿವ್ಯ ಗುರು ಪರಂಪರೆ. ಆತನೇ ಹೇಳುವಂತೆ ಆತನ ಗುರು "ಪ್ರತ್ಯಕ್ಷ ಪಂಚಾನನಂ ಸಂತಂ ಮಾಯಿ ದೇವಂ ಈತನ ಗುರು ಪ್ರಜ್ವಲ. ಮೂರ್ತಿ ಕೀರ್ತಿ ಭರಿತಂ ಶ್ರೀ ಮದ್‌ರಾಜಾ ಹ್ವಯಂ ಈತನ ಗುರು ಆಶೈವಾಗಮ ಸಿದ್ಧರಪ್ಪ ಪರಮ ಶ್ರೀ ಶಂಕರಾಚಾರ್ಯರ್" ಇವರು ಹನ್ನೆರಡನೆಯ ಶತ ಮಾನದ ರೇವಣಸಿದ್ಧರ ಕಾಲದವರು. ಹರಿಹರ ಗುರುವು ಲಿಂಗಯಜ್ಞೋಪವೀತಧಾರಿ ಗೋಳಂಕೀ ಮಠದ ಆರಾಧ್ಯ ಸಂಪ್ರದಾಯದವನೆಂದು ಹೇಳುವ ಕಪಟರಾಳರ ಮಾತು ಒಪ್ಪ ತಕ್ಕುದೆ. ಇವರ ವಿಷಯದಲ್ಲಿ "They a dopt Lingayat fro-ms in Private worship but intermarry with Smarta Brahmins and will not dine with other Lingayats ........Their tradition regards four Aradhyas' v i z, Revana, Marula, Ekorama and Pandita as Successi e savatars and Precursors of Basave." ಎಂದು K.A. ನೀಲಕಂಠಶಾಸ್ತ್ರಿಗಳು ಅವರ ದಕ್ಷಿಣ ದೇಶದ ಮತಗಳ ವಿಷಯದ ಗ್ರಂಥದಲ್ಲಿ ಹೇಳಿದ್ದಾರೆ. ಆರಾಧ್ಯ ಬ್ರಾಹ್ಮಣರು ತಮ್ಮ ಮತ ಸ್ಥಾಪಕರೆಂದು ನಂಬಿರುವುದರಲ್ಲಿ ಮೊದಲಿಗರು. ಆದುದರಿಂದ ಇವರದು ರೇವಣಸಿದ್ಧ ಸಂಪ್ರದಾಯ. ಭಾಷ್ಯಕಾರ ಶಂಕರಾಚಾರ್ಯರು ರೇವಣಸಿದ್ಧ ಸಂಪ್ರದಾಯದವರೆನ್ನುವುದು ರೇವಣಸಿದ್ಧರಿಂದ ಚಂದ್ರ ಮೌಳೀಶ್ವರ ಲಿಂಗವನ್ನು ಪಡೆದವರೆನ್ನುವುದು ತಪ್ಪು ತಿಳುವಳಿಕೆ. ಅವರು ವಿಷ್ಣುವನ್ನು ಪರಮ ಬ್ರಹ್ಮವೆಂದಿರುವರು. ಶಿವನನ್ನಲ್ಲ. ಅವರು ಸಾಲಿಗ್ರಾಮ ಪೂಜೆಯನ್ನು ಹೇಳಿರುವರೇ ಹೊರತು ಲಿಂಗಪೂಜೆಯನ್ನಲ್ಲ. ಅವರು ಒಂಭತ್ತನೆಯ ಶತಮಾನದವರು. ಹನ್ನೆರಡನೇ ಶತಮಾನದ ರೇವಣರು ಲಿಂಗ ಪೂಜಕರು ಮಾಹೇಶ್ವರರು. ಭಾಷ್ಯಕಾರ ಶಂಕರಾಚಾರ್ಯರು ಮಾಹೇಶ್ವರ ಸಿದ್ಧಾಂತವನ್ನು ಖಂಡಿಸಿದ್ದಾರೆ. ಆರಾಧ್ಯ ಬ್ರಾಹ್ಮಣ ಶುದ್ಧ ಶೈವರು 'ಲಿಂಗದೊಡನೆ ಗಣಪತಿಯನ್ನು ಪೂಜಿಸುವರೆಂದು ನೀಲಕಂಠಶಾಸ್ತ್ರಿಗಳು ಹೇಳಿದ್ದಾರೆ. ಶೃಂಗೇರಿ ಮಠದಲ್ಲಿ ಲಿಂಗ ಗಣಪತಿ ಶಕ್ತಿ ಪೂಜೆಗಳು ನಡೆಯುತ್ತಿವೆ. ಶಾಂಕರ ಗೀತಾ ಭಾಷ್ಯದಲ್ಲಿ ಶಕ್ತಿ ಪೂಜೆ ಗಣಪತಿ ಪೂಜೆಗಳು ನಿಂದಿಸಲ್ಪಟ್ಟಿವೆ ಜಗನ್ಮಿಥ್ಯವಾದವನ್ನು ಪ್ರತಿಪಾದಿಸುವ ಶಾಂಕರ ಭಾಷ್ಯವು ಕರ್ಮ ಸಿದ್ಧಾಂತವನ್ನು ಹೇಳುತ್ತದೆ. ಆದರೆ ೬ ನೆಯ ಶತಮಾನದ್ದೆಂದು ಡಾ|| ಆತ್ರೇ

ಯರು ನಿರ್ಧರಿಸಿರುವ ಯೋಗವಾಸಿಷ್ಠವು " ಸರ್ವಸ್ತ್ರಮೇವ ತದ್ ಭ್ರಾಂತಿ ಮಾತ್ರಂ ಎಂದು ಹೇಳಿ ಜಗನ್ಮಿಥ್ಯ ವಾದವನ್ನು ಪ್ರತಿಪಾದಿಸುವುದಾದರೂ ಕರ್ಮ ಸನ್ಯಾಸ ವನ್ನು ಹೇಳದೆ ನಿಷ್ಕಾಮ ಕರ್ಮವನ್ನು ಪ್ರತಿ ಪಾದಿಸುತ್ತದೆ. " ಶಿವಂ ಬ್ರಹ್ಮವಿದಃ ಶಾಂತಂ " ಎಂದು ಹೇಳಿ ಶಿವನೇ ಪರಬ್ರಹ್ಮವೆನ್ನುವ ನಿಲುವನ್ನು ತಾಳಿದೆ. ವಿದ್ಯಾರ ಣ್ಯರ ಜೀವನ್ಮುಕ್ತ ವಿವೇಕದಲ್ಲಿ ಯೋಗ ವಾಸಿಷ್ಠದ ಹೆಸರನ್ನು ಹೇಳಿ ಅದರ 253 ಶ್ಲೋಕಗಳನ್ನು ಉದ್ಧರಿಸಿಕೊಂಡಿವೆ. ಹೀಗೆ ಯೋಗವಾಸಿಷ್ಠವನ್ನು ಅನು ಸರಿಸಿರುವ ವಿದ್ಯಾರಣ್ಯರು ಅದರಂತೆ ನಿಷ್ಕಾಮ ಕರ್ಮವನ್ನು ಅನುಸರಿಸಿ ವಿಜಯ ನಗರ ರಾಜ್ಯವನ್ನು ಕಟ್ಟಿದರು. ಸರ್ವಾಧಿಕಾರಿ ಶ್ರೀಕಂಠಶಾಸ್ತ್ರಿಗಳು ಹೇಳಿರುವಂತೆ– ' ಅವರಿಗಿಂತ ಪೂರ್ವದಲ್ಲಿದ್ದ ಗುರುಗಳಿಗೆ ಲೌಕಿಕ ಸಂಬಂಧವಿರಲಿಲ್ಲವೆಂದು ಧಾರಾ ಳವಾಗಿ ಹೇಳಬಹುದು '. ಹೀಗೆ ವಿದ್ಯಾರಣ್ಯರು ಹೊಸ ಸಂಪ್ರದಾಯವನ್ನು ಪ್ರಾರಂ ಭಿಸಿದುದರಿಂದಲೇ ಮುಂದಿನ ಗುರುಗಳನ್ನು 5917 ಮತ್ತು 24 ನೆಯ ಶಾಸನಗ ಳಲ್ಲಿ ವಿದ್ಯಾರಣ್ಯ ಸ್ವಾಮಿಗಳವರ ಪರಂಪರೆಯವರೆಂದು ಹೇಳಲಾಗಿದೆ. ' ಪುರುಷಾರ್ಥ ಪ್ರಬೋಧ ' ಗ್ರಂಥೋಕ್ತವಾದ ವಿದ್ಯಾರಣ್ಯರ ಶುದ್ಧ ಶೈವ ಸಂಪ್ರದಾಯವು ಬಹಳ ಕಾಲ ಮುಂದು ವರೆಯಲಿಲ್ಲ.

ವೀರಶೈವರ ಎರಡು ಪಂಗಡಗಳನ್ನು ಒಟ್ಟುಗೂಡಿಸಿದ ತುರುಷ್ಕರ ಆಕ್ರಮ ಣದ ಭಯವು ಪ್ರೌಢದೇವರಾಯನು ಲಿಂಗಾಯಿತನಾದ ಮೇಲೆ ತಪ್ಪಿಹೋಯಿತು. ಅವನು ಸಾಮ್ರಾಜ್ಯದಲ್ಲಿ ಸುಖ ಶಾಂತಿಗಳು ನೆಲೆಸುವಂತೆ ಮಾಡಿದಮೇಲೆ ೧೦೧ ವಿರಕ್ತರ ಪ್ರಭಾವದಿಂದ ಅನೇಕ ಶೂದ್ರರು ಲಿಂಗಾಯಿತರಾದರು. ಲಿಂಗ ಯಜ್ಞೋಪ ವೀತಧಾರಿ ಶುದ್ಧ ಶೈವರಲ್ಲಿ ಹಿಂದಿನ ಧರ್ಮವನ್ನು ಬಿಡಲಾರದವರು ಬ್ರಾಹ್ಮಣ ಪದವಿರುವ ಆರಾಧ್ಯ ಬ್ರಾಹ್ಮಣರೆಂಬ ಹೆಸರನ್ನಿಟ್ಟುಕೊಂಡರು. ಶೂದ್ರರೂ ಧರಿಸು ತ್ತಿದ್ದ ಲಿಂಗವನ್ನು ಕೆಲವರು ಧರಿಸಲಾರದೇ ಕೆಲವರು ಲಿಂಗ ಪೂಜೆ ಲಿಂಗಧಾರಣೆ ಗಳನ್ನು ತ್ಯಜಿಸಿ ಅಲಿಂಗಿಸ್ಮಾರ್ತ ಬ್ರಾಹ್ಮಣರೊಡನೆ ಸೇರಿಕೊಂಡರು. ಶೃಂಗೇರಿ ಮಠದ ಗುರುಗಳು ವಿದ್ಯಾರಣ್ಯರ ಕಾಲಾನಂತರ ಅಷ್ಟು ಹೆಸರುವಾಸಿಯಾದವರಲ್ಲ. ರಾಜಗುರುಗಳಂತೂ ಆಗಿರಲಿಲ್ಲ. ಪ್ರೌಢದೇವರಾಯನ ಕಾಲಾನಂತರ ರಾಜ್ಯದಲ್ಲಿ ಶಾಂತಿ ಇರಲಿಲ್ಲ. ಅವರು ಶೃಂಗೇರಿಯನ್ನು ಕೆಲಕಾಲ ಬಿಡಬೇಕಾಯಿತು. ಎನ್ನ ಲಾಗಿದೆ. ಅನಂತರ ಬಂದ ವೈಷ್ಣವರಾಜರು ಶೈವ ಶೃಂಗೇರಿ ಗುರುಗಳಿಗೆ ಅನು ಕೂಲವಾಗಿರಲಿಲ್ಲ. ಕೆಳದಿ ರಾಜರು ಶೃಂಗೇರಿ ಮಠವನ್ನು ಉದ್ಧಾರಮಾಡುವ ಹೊತ್ತಿಗೆ ಪುರುಷಾರ್ಥ ಪ್ರಬೋಧೋಕ್ತಿ ಆರಾಧ್ಯ ಬ್ರಾಹ್ಮಣ ಸಂಪ್ರದಾಯವನ್ನು ಆ ಗುರುಗಳು ತ್ಯಜಿಸಿದ್ದರೋ ಅಥವಾ ಆಮೇಲೆ ತ್ಯಜಿಸಿದರೋ ತಿಳಿಯದು. ಆದರೆ ಗುರುವಂಶ ಕಾವ್ಯವನ್ನು ಬರೆಸುವ ಹೊತ್ತಿಗೆ ರೇವಣಸಿದ್ಧ ಸಂಪ್ರದಾಯವು ಹೆಸರು ಮಟ್ಟಿಗಾದರೂ ಉಳಿದಿದ್ದಿತು. (ಮುಗಿಯಿತು)

# ಜಿನುಗು ನೀರಾವರಿ ಪದ್ಧತಿ

## ( DRIP IRRIGATION )

—ಬಿ. ಸಿ. ಶಾಂತರಾಜು

ಜಿನುಗು ನೀರಾವರಿ ಪದ್ಧತಿಯು ಗಿಡದಿಂದ ಗಿಡಕ್ಕೆ ಹೆಚ್ಚು ಅಂತರವಿರುವ ತೋಟಗಾರಿಕೆ ಬೆಳೆಗಳಾದ ತೆಂಗು, ಸಪೋಟ, ಸೀಬೆ, ಮಾವು, ನಿಂಬೆ, ಕೊಕ್ಕೊ ಕಿತ್ತಳೆ ಈ ತರಹದ ಹಣ್ಣಿನ ಗಿಡಗಳಿಗೆ ನೀರು ಹಾಯಿಸಲು ಉತ್ತಮವಾದ ನೀರಾವರಿ ಪದ್ಧತಿ. ಈ ಪದ್ಧತಿಯು ಮುಂದುವರೆದ ರಾಷ್ಟ್ರಗಳಲ್ಲಿ ದಿನೇ ದಿನೇ ಹೆಚ್ಚು ಬಳಕೆಗೆ ಬರುತ್ತಿದೆ. ಅಲ್ಲದೆ ವ್ಯವಸಾಯ ಕ್ಷೇತ್ರದಲ್ಲಿ ಅತಿ ಮುಂದುವರೆದ ರಾಷ್ಟ್ರಗಳಾದ ಇಸ್ರೇಲ್ ಮತ್ತು ಅಮೇರಿಕಾ ದೇಶಗಳಲ್ಲಿ ರೈತರು ಜಿನುಗು ನೀರಾವರಿ ಪದ್ಧತಿಯನ್ನು ಅಳವಡಿಸಿಕೊಂಡು ಹಣ್ಣಿನ ಗಿಡಗಳನ್ನು ಬೆಳೆದು ಲಾಭ ಪಡೆಯುತ್ತಿದ್ದಾರೆ.

ಸುಮಾರು 25 ವರ್ಷಗಳ ಹಿಂದೆ ಇಸ್ರೇಲ್ ದೇಶದಲ್ಲಿ ಸಿಮ್‌ಚಾ ಬ್ಲಾಸ್ (Simcha Blass) ಎಂಬ ರೈತನು ಆಕಸ್ಮಾತ್ತಾಗಿ ಕಂಡುಹಿಡಿದ ನೀರಾವರಿ ಪದ್ಧತಿ ಇದು.

ಸಿಮ್‌ಚಾ ಬ್ಲಾಸನು ತನ್ನ ಬಾವಿಯಿಂದ ಕಬ್ಬಿಣದ ಪೈಪುಗಳನ್ನು ಜೋಡಿಸಿ; ಕಿತ್ತಳೆ ಗಿಡಗಳಿಗೆ ನೀರು ಹಾಯಿಸುತ್ತಿದ್ದನಂತೆ. 7 ಎಕರೆಯ ಕಿತ್ತಳೆ ಹಣ್ಣಿನ ತೋಟದಲ್ಲಿ ಒಂದೇ ಒಂದು ಕಿತ್ತಳೆ ಗಿಡವು ಸುಮಾರು 200 ರಷ್ಟು ಹೆಚ್ಚು ಹಣ್ಣನ್ನು ಕೊಟ್ಟಿತಂತೆ. ಇದನ್ನು ಕಂಡು ಅವನಿಗೆ ತುಂಬಾ ಆಶ್ಚರ್ಯವಾಯಿತಂತೆ.

ಇದು ಹೇಗೆ ಒಂದೇ ಒಂದು ಗಿಡವು ಇಷ್ಟು ಇಳುವರಿ ಕೊಟ್ಟಿದೆಯೆಂದು ಪರೀಕ್ಷೆಮಾಡಿ ನೋಡಿದಾಗ ಹೆಚ್ಚು ಇಳುವರಿ ಕೊಟ್ಟ ಕಿತ್ತಳೆ ಗಿಡದ ಪಕ್ಕದಲ್ಲಿ ಕಬ್ಬಿಣದ ಪೈಪು ತುಕ್ಕಹಿಡಿದು ಸಣ್ಣ ರಂಧ್ರದಿಂದ ನೀರು ತೊಟ್ಟು ತೊಟ್ಟು ಜಿನುಗಿ ಕಿತ್ತಳೆ ಗಿಡದ ಸುತ್ತಲೂ, ನೀರು ವರ್ಷದ ಎಲ್ಲಾ ಕಾಲದಲ್ಲಿಯೂ ಬೇರಿನಸುತ್ತಲೂ, ಸಾಕಷ್ಟು ಪ್ರಮಾಣದಲ್ಲಿ ನಿಂತಿತ್ತಂತೆ. ಇದನ್ನು ಪರೀಕ್ಷೆಮಾಡಿ ನೋಡಿದ ಮೇಲೆ ಸಿಮ್‌ಚಾ ಬ್ಲಾಸ್‌ನಿಗೆ ಒಂದು ಕಿತ್ತಳೆಗಿಡ ಶೇಕಡಾ 200 ರಷ್ಟು ಹೆಚ್ಚು ಇಳುವರಿ ಕೊಡಲು ಇದೇ ಕಾರಣವಿರಬಹುದೇ? ಎಂದು ಮನಸ್ಸಿನಲ್ಲಿ ಯೋಚನೆ ಮಾಡತೊಡಗಿದನಂತೆ. ಇದನ್ನು ಪರೀಕ್ಷೆ ಮಾಡಲು ಅವನು ಕಿತ್ತಳೆ ಗಿಡದ ಪಕ್ಕದಲ್ಲಿ ಎಲ್ಲೆಲ್ಲಿ ಪೈಪು ಹೋಗಿತ್ತೋ ಅದರಲ್ಲೆಲ್ಲಾ ಸಣ್ಣ ರಂಧ್ರವನ್ನು ಕೊರೆದು ನೀರು ಜಿನುಗು

ವಂತೆ ಮಾಡಿದನಂತೆ. ಹೀಗೆ ಮತ್ತೆ ಒಂದು ವರ್ಷ ಪರೀಕ್ಷೆ ಮಾಡಿದ ಮೇಲೆ ನೀ
ಜಿನುಗಿದ ಸ್ಥಳದಲ್ಲಿದ್ದ ಕಿತ್ತಳೆ ಗಿಡಗಳೆಲ್ಲಾ ಸುಮಾರು 200 ರಷ್ಟು ಹೆಚ್ಚು ಇಳ
ವರಿ ಕೊಟ್ಟವಂತೆ.

ಈ ವಿಷಯವನ್ನು ಹಿಬ್ರೂ ವ್ಯವಸಾಯ ವಿಶ್ವವಿದ್ಯಾಲಯದ ತಜ್ಞರಿಗೆ ತಿಳಿ ಈ ವಿಚಾರದಲ್ಲಿ ಹೆಚ್ಚು ಹೆಚ್ಚು ಸಂಶೋಧನೆ ನಡೆಸುವಂತೆ ಕೇಳಿಕೊಂಡನಂತೆ ಆಮೇಲೆ ಅವರು ಬಹಳ ಆಳವಾಗಿ ಹಲವಾರು ಹಣ್ಣಿನ ಗಿಡಗಳ ಮೇಲೆ ನಡೆಸಿದ ಸಂಶೋಧನೆಯ ಫಲದಿಂದ ದಿನೇ ದಿನೇ ಜಿನುಗು ನೀರಾವರಿ ಪದ್ಧತಿಯು ಹೆಚ್ಚು ಹೆಚ್ಚು ಪ್ರಚಾರಕ್ಕೆ ಬಂದಿತು. ಅಲ್ಲದೆ ಹೆಚ್ಚು ಹೆಚ್ಚು ಬುದ್ಧಿವಂತ ರೈತರು ಇದನ್ನು ಅಳವಡಿಸಿಕೊಂಡು ತಮ್ಮ ತಮ್ಮ ಹಣ್ಣಿನ ತೋಟಗಳಲ್ಲಿ ಹೆಚ್ಚು ಹೆಚ್ಚು ಹಣ್ಣಿನ ಗಿಡಗಳನ್ನು ಬೆಳೆದು ಲಾಭ ಪಡೆಯಲು ಪ್ರಾರಂಭಿಸಿದರು. ಜಿನುಗು ನೀರಾವರಿಪದ್ಧತಿಯು ಎರಡು ರೀತಿಯದಾಗಿರುತ್ತದೆ.

ಎ) **ಕೊಳವೆ ಜಿನಗು ನೀರಾವರಿ ಪದ್ಧತಿ** :- (Line source Emitters ಇದು ಎಲ್ಲಾ ರೀತಿಯ ತರಕಾರಿ ಹಿಪ್ಪುನೇರಳೆ ಹತ್ತಿ ಅಂದರೆ ಸಾಲಿನ ಬೆಳೆಗಳಿಗೆ ಸೂಕ್ತವಾದುದು. ಇದರ ಬೆಲೆ ಬಹಳ ಹೆಚ್ಚಾಗಿದ್ದರಿಂದ ಇದನ್ನು ಅಳವಡಿಸಲು ಭಾರತದಂತಹ ಸಾಮಾನ್ಯ ರೈತರಿಗೆ ಸಾಧ್ಯವಿಲ್ಲ. ಬಿ) **ಏಕ ಬಿಂದು ಜಿನಗು ನೀರಾವರಿ ಪದ್ಧತಿ** (Point source Emitters) ಇದು ಹೆಚ್ಚು ಅಂತರವಿರುವ ತೋಟಗಾರಿಕೆ ಬೆಳೆಗಳಿಗೆ ಅತಿ ಉತ್ತಮವಾದುದು, ಅತಿ ಕಡಿಮೆ ಬೆಲೆಯದ್ದಾಗಿರುತ್ತದೆ. ಜಿನುಗು ನೀರಾವರಿ ಪದ್ಧತಿಯಲ್ಲಿ ಯಾವಾಗಲೂ, ನೀರನ್ನು ನಿಧಾನವಾಗಿ ತೊಟ್ಟು ತೊಟ್ಟಾಗಿ ಜಿನುಗಿಸುವುದರಿಂದ ಗಿಡದ ಸುತ್ತಲೂ ಶೇಕಡ 16 ಚದರಡಿಗಳಷ್ಟು ಮಣ್ಣಿನಲ್ಲಿ ವರ್ಷದ 365 ದಿವಸವೂ ಸಾಕಷ್ಟು ಪ್ರಮಾಣದಲ್ಲಿ ತೇವಾಂಶ ಇರುತ್ತದೆ. ಗಿಡಗಳು ಯಾವ ರೀತಿಯ ಕಷ್ಟವೂ ಇಲ್ಲದೆ ನೀರನ್ನು ತೆಗೆದುಕೊಳ್ಳಬಹುದು. ಇತರೇ ರೀತಿಯ ನೀರಾವರಿ ಪದ್ಧತಿಯಲ್ಲಿ (Flood Irrigation) ಪ್ರವಾಹ ನೀರಾವರಿ ಪದ್ಧತಿ ಅಥವಾ ( Sprinkler Irrigation ) ಸಿಂಪರಣೆ ನೀರಾವರಿ ಪದ್ಧತಿಯಲ್ಲಿ ವಾರಕ್ಕೊಂದಾವರ್ತಿ ಏಳು ದಿವಸಕ್ಕೆ ಬೇಕಾಗುವಷ್ಟು ನೀರನ್ನು ಒಂದೆರಡು ಗಂಟೆಗಳಲ್ಲಿ ಹಾಯಿಸುವುದರಿಂದ ಗಿಡಗಳಿಗೆ ಮೊದಲೆರಡು ದಿವಸ ಅಜೀರ್ಣವಾದಂತಾಗಿ ಮೊದಲ ಒಂದೆರಡು ದಿನಗಳ ಕಾಲ ಬೆಳವಣಿಗೆಯೇ ನಿಂತು ಹೋಗುತ್ತದೆ. ಮತ್ತೆ ಮೂರು ನಾಲ್ಕು ದಿವಸಗಳಲ್ಲಿ ಮಣ್ಣಿನಲ್ಲಿ ಸಾಕಷ್ಟು ಪ್ರಮಾಣದಲ್ಲಿ ನೀರು ಇಲ್ಲದಿರುವುದರಿಂದ ಬೇರುಗಳು ನೀರನ್ನು ತೆಗೆದುಕೊಳ್ಳಲು ಬಹಳ ಶ್ರಮಪಡಬೇಕಾಗುತ್ತದೆ. ಕಡೆಯ ಒಂದೆರಡು ದಿವಸಗಳಲ್ಲಿ ಮಣ್ಣಿನಲ್ಲಿ ನೀರೇ ಇಲ್ಲದಿರುವುದರಿಂದ ಬೆಳವಣಿಗೆಯೇ ನಿಂತು ಹೋಗುತ್ತದೆ.

## ಜಿನುಗು ನೀರಾವರಿ ಪದ್ಧತಿಯಿಂದಾಗುವ ಅನುಕೂಲಗಳು

1) **ನೀರಿನ ಉಳಿತಾಯ** :– ನೀರು ಮತ್ತು ನೀರಿನಲ್ಲಿ ಕರಗಿಸಿದ ಪೋಷಕಾಂತ ನ್ನು (dissolved fertilizers) ಪ್ಲಾಸ್ಟಿಕ್ ಪೈಪುಗಳ ಮುಖಾಂತರ ಗಿಡ ಬೇರಿನ ವಲಯಕ್ಕೆ ಸೇರಿಸಬಹುದು. ನೀರನ್ನು ನೇರವಾಗಿ ಬೇರಿನ ವಲಯಕ್ಕೆ ಂಡು ಹೋಗಿ ತೊಟ್ಟು ತೊಟ್ಟಾಗಿ ಜಿನುಗಿಸುವುದರಿಂದ, ಯಾವ ರೀತಿಯಿಂದಲೂ ರು ಪೋಲಾಗುವುದಿಲ್ಲ. ಭೂಮಿಯ ಮೇಲೆ ನೀರನ್ನು ಹಾಸಿ ಹಾಯಿಸುವಾಗ ರು ಕಾಲುವೆಗಳಲ್ಲಿ ಇಂಗಿ ನೀರು ಪೋಲಾಗುತ್ತದೆ. ಸಿಂಪರಣೆ ನೀರಾವರಿ ಪದ್ಧತಿ ಲ್ಲಿ (Sprinkler Irrigation) ಶೇಕಡ 25 ರಿಂದ 30 ರಷ್ಟು ನೀರು ಆವಿ ಾಗಿ ಹೋಗುತ್ತದೆ. ಈ ರೀತಿಯನಷ್ಟವು ಜಿನುಗು ನೀರಾವರಿ ಪದ್ಧತಿಯಲ್ಲಿ ಗುವುದಿಲ್ಲ. ಜಿನುಗು ನೀರಾವರಿ ಪದ್ಧತಿಯಲ್ಲಿ ಬೇರಿನ ಒಂದು ಭಾಗಕ್ಕೆ ಸಾಕಷ್ಟು ರನ್ನು ಹಾಯಿಸುವುದರಿಂದ ಅತಿ ಕಡಿಮೆ ನೀರನ್ನು ಅತಿ ಹೆಚ್ಚು ಪ್ರದೇಶಕ್ಕೆ ಪಯೋಗಿಸಬಹುದು. ಇತರೇ ನೀರಾವರಿ ಪದ್ಧತಿಯಲ್ಲಿ ನೀರಿನ ಮೇಲೆ ಯಾವ ಡಿತವೂ ಇಲ್ಲದಿರುವುದರಿಂದ ಆವಶ್ಯಕತೆ ಇಲ್ಲದೆ ಇರುವೆಡೆಗಳಲ್ಲೆಲ್ಲಾ ನೀರು ಹಾಯಿ ುವುದರಿಂದ ನೀರು ಪೋಲಾಗುತ್ತದೆ.

**ಕಡಿಮೆ ಶ್ರಮ** :-

) ಒಬ್ಬ ಕೆಲಸಗಾರನು ಯಾವ ಶ್ರಮವೂ ಇಲ್ಲದೆ 50 ರಿಂದ 100 ಎಕರೆಗಳಷ್ಟು ಮೀನಿಗೆ ನೀರು ಹಾಯಿಸಬಹುದು. ಬಿ) ಕೆಲಸಗಾರನು ದಿನಕ್ಕೊಂದು ಸರ್ತಿ ವಾಟ್ (Gate valve) ಯನ್ನು ತೆಗೆದು ನೀರು ಪ್ಲಾಸ್ಟಿಕ್ ಪೈಪಿನಲ್ಲಿ ಹರಿಯು ಂತೆ ಮಾಡುವುದು. ನಾಲ್ಕರಿಂದ ಆರು ಘಂಟೆಗಳ ನಂತರ ಕವಾಟಿಯನ್ನು ನಿಲ್ಲಿಸು ದು, ಇವಿಷ್ಟೇ ಒಬ್ಬ ಕೆಲಸಗಾರನು ಜಿನುಗು ನೀರಾವರಿ ಪದ್ಧತಿಯಲ್ಲಿ ಮಾಡ ೇಕಾಗಿರುವ ಕೆಲಸ. ಸಿ) ಕೆಲಸಗಾರನು ಸನಿಕೆಯನ್ನು ತೆಗೆದುಕೊಂಡು ಕಾಲು ಯಲ್ಲಿ ನೀರನ್ನು ಹಾಯಿಸಿ ಒಂದೊಂದು ಗಿಡದ ಹತ್ತಿರಕ್ಕೂ ಹೋಗಿ ನೀರು ಿರಿಸಬೇಕಾಗಿಲ್ಲ. ಡಿ) ಸಿಂಪರಣೆ ನೀರಾವರಿ ಪದ್ಧತಿಯಲ್ಲಿ ಅಲ್ಯೂಮಿನಿಯಂ ಪೈಪು ಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಬದಲಾಯಿಸುವಂತೆ ಜಿನುಗು ೀರಾವರಿ ಪದ್ಧತಿಯಲ್ಲಿ ಪೈಪುಗಳನ್ನು ಬದಲಾಯಿಸಬೇಕಾಗಿಲ್ಲ. ಇ) ಇತರೇ ನೀರಾ ವರಿ ಪದ್ಧತಿಯಲ್ಲಿ ಕತ್ತಲಾದಮೇಲೆ ನೀರು ಹಾಯಿಸಲು ಸಾಧ್ಯವೇ ಇಲ್ಲ. ಜಿನುಗು ೀರಾವರಿ ಪದ್ಧತಿಯಲ್ಲಿ ಕತ್ತಲಾದಮೇಲೆಯೂ ರಾತ್ರಿಯಾದ ಮೇಲೆಯೂ ಎಲ್ಲಾ ಕಾಲದಲ್ಲಿಯೂ ಯಾವ ಕಷ್ಟವೂ ಇಲ್ಲದೆ ನೀರು ಹಾಯಿಸಬಹುದು.

**ಕಡಿಮೆ ವಿದ್ಯುಚ್ಛಕ್ತಿ ಖರ್ಚು**:– ಜಿನುಗು ನೀರಾವರಿ ಪದ್ಧತಿಯಲ್ಲಿ ಅತಿ ಕಡಿಮೆ ೀರು ಬೇಕಾಗಿರುವುದರಿಂದ ಬಹಳ ಕಡಿಮೆ ನೀರನ್ನು ಪಂಪುಮಾಡಲಾಗುತ್ತದೆ. ಇದ ಂದ ಕಡಿಮೆ ವಿದ್ಯುಚ್ಛಕ್ತಿ ಖರ್ಚಾಗುತ್ತದೆ. ಸುಮಾರು 20 ಎಕರ್ ಭೂಮಿ ಯನ್ನು ವ್ಯವಸಾಯ ಮಾಡಲು 1 ರಿಂದ 2 ಅಶ್ವ ಶಕ್ತಿಯುಳ್ಳ ಪಂಪುಸೆಟ್ಟು ಇದ್ದರೆ

ಸಾಕು. ಸಿಂಪರಣೆ ನೀರಾವರಿ ಪದ್ಧತಿಯಲ್ಲಿ 20 ಎಕರೆಗೆ ಸುಮಾರು 30 ರಿಂ 40 ಅಶ್ವ ಶಕ್ತಿಯುಳ್ಳ ಪಂಪುಸೆಟ್ಟು ಬೇಕಾಗುತ್ತದೆ. ಮನೆ ಕರೆಂಟಿನ (Single phase Pumps) ಸಣ್ಣ ಪಂಪು ಸೆಟ್ಟುಗಳನ್ನು ಅಳವಡಿಸಿಕೊಂಡು ಹೆಚ್ಚು ಜಮೀನಿಗೆ ಜಿನುಗು ನಿರಾವರಿ ಪದ್ಧತಿಯಲ್ಲಿ ನೀರು ಹಾಯಿಸಬಹುದು.

**ಉಪ್ಪು ನೀರನ್ನೂ ಸಹ ಉಪಯೋಗಿಸಬಹುದು:** ಜಿನುಗು ನೀರಿನ ಪದ್ಧತಿಯಲ್ಲಿ ಹೆಚ್ಚು ಲವಣಾಂಶವುಳ್ಳ (3000 Parts permillion) ನೀರನ್ನು ಉಪಯೋಗಿಸಿ ಗಿಡಗಳನ್ನು ಬೆಳೆಸಬಹುದು.

**ಪೋಷಕಾಂಶ ವಿನಿಯೋಗ** 1) ನೀರನಲ್ಲಿ ಕರಗುವ ಪೋಷಕಾಂಶಗಳನ್ನು ಯಾವ ಶ್ರಮವೂ ಇಲ್ಲದೆ ಯಾವ ಕೆಲಸಗಾರನ ಸಹಾಯವೂ ಇಲ್ಲದೆ ಜಿನುಗು ನೀರಾವರಿ ಪದ್ಧತಿಯಲ್ಲಿ ಗಿಡಗಳಿಗೆ ವಿನಿಯೋಗ ಮಾಡಬಹುದು. 2) ಪೋಷಕಾಂಶಗಳನ್ನು ನೀರಿನ ತೊಟ್ಟಿಯಲ್ಲಿಟ್ಟರೆ ಸಾಕು (Storage Tank) ಪೋಷಕಾಂಶಗಳು ನಿಧಾನವಾಗಿ ಕರಗಿ, ನೀರಿನ ಜತೆಯಲ್ಲಿ ಬೇರನ್ನು ಸೇರುತ್ತದೆ. ಪೋಷಕಾಂಶಗಳು ನೀರಿನಲ್ಲಿ ಬೆರೆತು ಸಾರ ಕಡಿಮೆ ( Less Concentration ) ಯಾಗಿರುವುದರಿಂದ ಗಿಡಗಳಿಗೆ ಯಾವ ರೀತಿಯ ತೊಂದರೆಯೂ ಆಗುವುದಿಲ್ಲ. ಪೋಷಕಾಂಶಗಳು ನೀರಿನಲ್ಲಿ ಕರಗಿ ದ್ರವರೂಪದಲ್ಲಿರುವುದರಿಂದ ನಷ್ಟವಾಗದೆ (Ammoniacal Fixation) ಉಪಯೋಗಿಸಿಕೊಳ್ಳುತ್ತದೆ. ಈಗ ರೂಢಿಯಲ್ಲಿರುವಂತೆ ವರ್ಷಕ್ಕೊಂದು ಸರ್ತಿ ಅಥವಾ ವರ್ಷಕ್ಕೆರಡು ಬಾರಿ ಪೋಷಕಾಂಶಗಳನ್ನು ಗಿಡಕ್ಕೆ ಕೊಡುವ ಬದಲು, ಅಷ್ಟೇ ಪ್ರಮಾಣದ ಪೋಷಕಾಂಶವನ್ನು ವಿಭಾಗಿಸಿ ತಿಂಗಳಿಗೊಂದಾವರ್ತಿ ಇಲ್ಲ ಎರಡಾವರ್ತಿ ಕೊಟ್ಟರೆ ಹಾಕಿದ ಎಲ್ಲಾ ಪೋಷಕಾಂಶಗಳು ಸ್ವಲ್ಪ ಸ್ವಲ್ಪವಾಗಿ ಗಿಡಕ್ಕೆ ಸೇರಿ ಯಾವ ರೀತಿಯು ನಷ್ಟವಿರುವುದಿಲ್ಲ. ಹೆಚ್ಚು ಅನುಭವವಿಲ್ಲದ ಕೆಲಸಗಾರರನ್ನು ಪೋಷಕಾಂಶಗಳನ್ನು ಕೈಯಲ್ಲಿ ಹಾಕಲು ಬಿಟ್ಟಾಗ ಒಂದು ಗಿಡಕ್ಕೆ ಹೆಚ್ಚಾಗಿ ಹಾಕಬಹುದು ಇನ್ನೊಂದು ಗಿಡಕ್ಕೆ ಕಮ್ಮಿ ಹಾಕಬಹುದು. ಹೆಚ್ಚು ಹಾಕಿದ ಗಿಡಕ್ಕೆ ತೊಂದರೆಯಾಗಿ ಗಿಡಗಳ ಬೇರು ಸುಟ್ಟುಹೋಗಬಹುದು. ಕಡಿಮೆ ಹಾಕಿದ ಗಿಡದಲ್ಲಿ ಪೋಷಕಾಂಶಗಳು ಸಾಲದೆ ಬೆಳೆ ಕುಂಠಿತವಾಗಬಹುದು.

**ಹೆಚ್ಚು ಇಳುವರಿ ದಾಖಲೆ :-** 1) ಜಿನುಗು ನೀರಾವರಿ ಪದ್ಧತಿಯಲ್ಲಿ ಶೇಖಡ 100 ರಿಂದ 200 ರಷ್ಟು ಹೆಚ್ಚು ಇಳುವರಿ ದಾಖಲೆಯಾಗಿದೆ. ಇದಕ್ಕೆ ಕಾರಣ ವೇನು ? ಇತರೇ ನೀರಾವರಿ ಪದ್ಧತಿಯಲ್ಲಿ ವಾರಕ್ಕೊಂದಾವರ್ತಿಯೋ ಅಥವಾ 10 ದಿವಸಕ್ಕೊಂದಾವರ್ತಿಯೋ ಜಮೀನಿನಲ್ಲಿರುವ ಬೆಳೆಗಳಿಗೆ ಬೇಕಾದ ನೀರನ್ನು ಒಂದೆರಡು ಗಂಟೆಗಳ ಕಾಲ ಹರಿಸಿ ಕೈಬಿಡುತ್ತೇವೆ. ಮತ್ತೆ 7 ದಿವಸಕ್ಕೊ ಅಥವಾ 10 ದಿನಕ್ಕೋ ನೀರನ್ನು ಹಾಯಿಸುತ್ತೇವೆ. ಈ ಹತ್ತು ದಿವಸಗಳ ಮೊದಲೆರಡು ದಿನಗಳಲ್ಲಿ ಜಮೀನಿನಲ್ಲೆಲ್ಲಾ ನೀರು ಅವಶ್ಯಕತೆಗಿಂತ ಹೆಚ್ಚಾಗಿರುವುದರಿಂದ ಮತ್ತೆ

ನೀರಿನ ಜತೆ ಆಮ್ಲಜನಕ ಇಲ್ಲದಿರುವುದರಿಂದ (ಭೂಮಿಯು ನೀರನ್ನು ನಿಧಾನವಾಗಿ ಹೀರಿ, ಹಿಡಿದು ಇಟ್ಟುಕೊಳ್ಳುವ ಪ್ರಮಾಣಕ್ಕಿಂತ ಹೆಚ್ಚಾಗಿ ಒಂದೇ ಸಮನೆ ನೀರನ್ನು ಹಾಯಿಸಿದಾಗ ಭೂಮಿಯಲ್ಲಿ ಮಣ್ಣಿನಲ್ಲಿರುವ ಆಮ್ಲಜನಕವನ್ನೆಲ್ಲಾ ಮಣ್ಣಿನಿಂದ ಹೊರಗೆಡವಿ ಬರೀ ನೀರೇ ತುಂಬಿರುತ್ತದೆ.) ಹೀಗೆ ಆಮ್ಲಜನಕವಿಲ್ಲದೆ ನೀರು ಇರು ವಷ್ಟು ದಿವಸವೂ ನೀರು ಇದ್ದರೂ ಇದು ಉಪಯೋಗವಿಲ್ಲದ ನೀರಾಗುತ್ತದೆ. ಇದರಿಂದ ಗಿಡಗಳಿಗೆ ಯಾವ ರೀತಿಯ ಉಪಯೋಗವೂ ಆಗುವುದಿಲ್ಲ. ಒಂದೆರಡು ದಿನಗಳಾದ ಮೇಲೆ ನೀರು ಹಿಂಗಿದ ಮೇಲೆ ಮಣ್ಣಿನಲ್ಲಿ ಆಮ್ಲಜನಕ ಸೇರಿದ ಮೇಲೆ ಐದಾರು ದಿವಸ ನೀರು ಉಪಯೋಗಕ್ಕೆ ಬರುತ್ತದೆ. ಮತ್ತೆ ಕಡೆಯ ಎರಡು ಮೂರು ದಿವಸ ಸಾಕಷ್ಟು ನೀರು ಮಣ್ಣಿನಲ್ಲಿ ಇಲ್ಲದಿರುವುದರಿಂದ ಮಣ್ಣಿನಿಂದ ನೀರನ್ನು ಹೀರಲು ಬೇರಿಗೆ ಬಹಳ ಕಷ್ಟವಾಗುತ್ತದೆ. ಹೀಗೆ ಗಿಡಗಳ ಮರಗಳ ಬೆಳವಣಿಗೆಯಲ್ಲಿ ಹತ್ತು ದಿವಸದಲ್ಲಿ ನಾಲ್ಕಾರು ದಿವಸಗಳ ಬೆಳವಣಿಗೆ ಕುಂಟಿತ ವಾಗುವುದರಿಂದ, ಗಿಡಗಳು ಒಂದೇ ಸಮನೆ ಬೆಳೆಯುವುದಿಲ್ಲ. ಹೀಗೆ ಗಿಡಗಳ ಬೆಳವಣಿಗೆ ನಿಂತು ಮುಂದುವರಿಯುವುದರಿಂದ ಸಾಮಾನ್ಯ ನೀರಾವರಿ ಪದ್ಧತಿ ಯಲ್ಲಿ ಬೆಳೆಯ ಇಳುವರಿ ಅಷ್ಟು ಹೆಚ್ಚಾಗಿ ಬರುವುದಿಲ್ಲ. ಜಿನುಗು ನೀರಾವರಿ ಪದ್ಧ ತಿಯಲ್ಲಿ ವರ್ಷದ ಎಲ್ಲಾ ಕಾಲದಲ್ಲಿಯೂ ಬೇರಿನ ಸುತ್ತಲೂ ನೀರು ಗಾಳಿ (ಆಮ್ಲಜನಕ) ಮತ್ತು ಮಣ್ಣು ಸರಿಯಾದ ಪ್ರಮಾಣದಲ್ಲಿರುವುದರಿಂದ ಹೆಚ್ಚು ಇಳುವರಿ ಸಿಗುವುದಲ್ಲದೆ 15 ರಿಂದ 20 ದಿನಕ್ಕೆ ಮೊದಲು ಇಳುವರಿ ಬರುತ್ತದೆ.

ಜಿನುಗು ನೀರಾವರಿ ಪದ್ಧತಿಯಿಂದಾಗುವ ಉಪಯೋಗಗಳನ್ನು ಕಣ್ಣಾರೆ ನೋಡಬೇಕೆಂದರೆ ಈ ಕೆಳಗೆ ಕೊಟ್ಟಿರುವ ವಿಳಾಸಕ್ಕೆ ಭೇಟಿಕೊಟ್ಟು ನೋಡಬಹುದು.

1) ಶ್ರೀ ಜಿ. ಕಸ್ತೂರಿ ರಂಗನ್
ಕೆ. ಎಸ್. ಜಿ. ತೋಟ,
ದೇವನಹಳ್ಳಿ ವಿಜಯಪುರ ರಸ್ತೆ,
ದೇವನಹಳ್ಳಿ ತಾಲ್ಲೂಕು,
ಬೆಂಗಳೂರು ಡಿಸ್ಟ್ರಿಕ್ಟ್.

2) ಶ್ರೀ ಕೆ. ಹ್ಯಾಮಿಲ್ಟನ್
ಸನ್ ಸೆಟ್ ಫಾರಂ,
ಲಕ್ಷ್ಮೀಪುರಂ,
ದೊಡ್ಡ ಆಲದಮರದ ರಸ್ತೆ,
ಕುಂಬಳಗೋಡು ಪೋಸ್ಟು,
ಬೆಂಗಳೂರು ತಾಲ್ಲೂಕು.

3) ಶ್ರೀ ಪಿ. ವಿ. ಐತಾಳ್,
ಪಾರಂಪಳ್ಳಿ ಎಸ್ಟೇಟ್,
ಬಲ್ಲೂಪೇಟೆ,
ಹಾಸನ ಜಿಲ್ಲೆ.

4) ಶ್ರೀ. ಎ.ಎಸ್. ಚಂದ್ರೇಗೌಡ,
ಜಯದೇವಿ ಫಾರಂ,
ಮತಿಗಟ್ಟ,
ಕಡೂರು ತಾಲ್ಲೂಕು.

# ಅನುರೂಪ ಜೋಡಿ; ಸ್ವಯಂವರದ ಮೋಡಿ

—ಪ. ರಾಮಕೃಷ್ಣ ಶಾಸ್ತ್ರಿ

ಜೂನ್ ತಿಂಗಳಲ್ಲಿ (೧೯೭೯) ಪ್ರತಿ ವರ್ಷ ನಡೆಯುವ ಕ್ರಮದಲ್ಲೇ ಬಿಹಾರ ರಾಜ್ಯದ ಸೌರಾತ್ ಹಳ್ಳಿಯಲ್ಲಿ ಸ್ವಯಂವರ ನಡೆಯಿತು. ಜಗತ್ತಿನಲ್ಲೇ ಅಪೂರ್ವವಾದ ವಿಧಾನವೆಂದು ಕರೆಯಲ್ಪಡುವ ಈ ಪದ್ಧತಿ ಮೂರು ಶತಮಾನಗಳ ಹಿಂದಿನಿಂದಲೇ ನಡೆದು ಬಂದಿದೆ. ಮಿಥಿಲೆಯ ಬೇರೆ ಬೇರೆ ಸ್ಥಳಗಳಲ್ಲಿ ೭೫೦ ವರ್ಷಗಳ ಹಿಂದಿನಿಂದಲೇ ನಡೆಯುತ್ತ ಬಂದ ಇಂತಹ ರೂಢಿ ಈಗ ವಿರಳವಾಗಿದೆ. ಅದಿನ್ನೂ ಜೀವಂತವಾಗಿರುವುದು ಸೌರಾತ್ ಹಳ್ಳಿಯಲ್ಲಿ ಮಾತ್ರ.

ಈ ಸ್ವಯಂವರ ನಡೆಯುವುದು ಮೈಥಿಲಿ ಬ್ರಾಹ್ಮಣರ ಸಲುವಾಗಿ. ದೇಶಾದ್ಯಂತ ಹಬ್ಬಿರುವ ಅವರ ಜನಸಂಖ್ಯೆ ೩೫ ಸಾವಿರಕ್ಕಿಂತ ಹೆಚ್ಚಿಲ್ಲ. ಸೌರಾತ್ ಹಳ್ಳಿಯಲ್ಲಿ ದೊಡ್ಡ ದೊಡ್ಡ ಮರಗಳಿಂದ ಕೂಡಿದ ಮೈದಾನವೊಂದಿದೆ. ಅಲ್ಲಿ ಪ್ರತಿ ಮರದ ಬುಡದಲ್ಲಿ ಬೇರೆ ಬೇರೆ ಬಣ್ಣದ ಡೇರೆಗಳನ್ನು ಹೂಡಲಾಗಿರುತ್ತದೆ. ಡೇರೆಯೊಳಗೆ ಜಮಖಾನೆ ಹಾಸಿ ಗುಲಾಬಿ ವರ್ಣದ ಧೋತರವುಟ್ಟು ಕಣ್ಣಿಗೆ ಕಾಡಿಗೆ, ಹಣೆಗೆ ತಿಲಕ ಧರಿಸಿದ 'ವರ' ಕುಳಿತಿರುತ್ತಾನೆ. ಅವನ ಪಕ್ಕದಲ್ಲಿ ಬಂಧು–ಮಿತ್ರರು ಆಪ್ತೇಷ್ಟರು ಕುಳಿತಿರುತ್ತಾರೆ.

ತಮ್ಮ ಮಗಳಿಗೆ ಅನುರೂಪ ಜೋಡಿ ಆರಿಸಲು ಹೆಣ್ಣು ಹೆತ್ತ ತಂದೆಯರು ಬಂಧು–ಮಿತ್ರರೊಂದಿಗೆ ಅಲ್ಲಿಗೆ ಆಗಮಿಸಿ, ಪ್ರತಿ ಡೇರೆಗೂ ಹೊಕ್ಕು ತಮಗೆ ಸರಿಯೆಂದು ತೋರಿ ಬಂದ ಹುಡುಗನ ಊರು, ಕಸಬು, ಗೋತ್ರ ಇತ್ಯಾದಿಗಳನ್ನೆಲ್ಲ ವಿಚಾರಿಸುತ್ತಾರೆ. ಅವನ ಸಂಬಂಧ ಬೆಳೆಸಬಹುದೆಂದು ತೋರಿದರೆ ಅವನ ಸಂಬಂಧಿಕರೊಂದಿಗೆ ಮಾತುಕತೆ ಬೆಳೆಸುತ್ತಾರೆ.

ಅಲ್ಲಿಗೇ ಮದುವೆ ನಿಶ್ಚಯವಾಗುವುದಿಲ್ಲ. ವರನನ್ನು 'ಪಂಜೀಕಾರ'ನ ಬಳಿಗೆ ಕರೆದೊಯ್ಯಬೇಕು. ಪಂಜೀಕಾರನ ಬಳಿ ಎಲ್ಲಾ ಮೈಥಿಲಿ ಬ್ರಾಹ್ಮಣರ ಕುಲದ ಸಾವಿರಾರು ವರ್ಷ ಹಿಂದಿನ ಇತಿಹಾಸ ಬರೆದಿರುವ ತಾಳೇವಾಲೆಯ ಗ್ರಂಥಗಳಿರುತ್ತವೆ. ಅದರಲ್ಲಿ ಅವನ ಇತಿಹಾಸವನ್ನೆಲ್ಲ ಜಾಲಾಡಿಸಬೇಕು. ಏಕೆಂದರೆ ರಕ್ತಸಂಬಂಧದವರೊಂದಿಗೆ ಮದುವೆ ನಡೆಯುವುದನ್ನು ಅವರು ವಿರೋಧಿಸುತ್ತಾರೆ. ಹುಡುಗನ ತಂದೆಯಿಂದ ಏಳು ತಲೆಮಾರಿನವರೆಗೂ ಹುಡುಗಿಯ ತಾಯಿಯಿಂದ ಐದು ತಲೆಮಾರಿನವರೆಗೂ ದೇಹ ಸಂಬಂಧ ನಡೆಯದಿರುವ ವರ ಮಾತ್ರ ಸಂಬಂಧ ಬೆಳೆಸಲು

ನಾಗಿರುತ್ತಾನೆ. ಹಾಗೆ ನಡೆದಿಲ್ಲವೆಂದು ಪಂಜೀಕಾರ ಎಲ್ಲವನ್ನೂ ಪರಿಶೋಧಿಸಿ ದರೆ ವಿವಾಹ ನಿಶ್ಚಯವಾಗುತ್ತದೆ. ಮತ್ತೆ ಜಾತಕ ನೋಡುವ ಕ್ರಮ ಲ್ಲಿ ಇಲ್ಲ.

ಪಂಜೀಕಾರನ ಅನುಮತಿ ಸಿಕ್ಕಿದ ಕೂಡಲೇ ಕನ್ಯೆಯ ತಂದೆ ವರನ ತಂದೆಯ ಕೈ ದು, 'ಇಂದಿನಿಂದ ನನ್ನ ಹುಡುಗಿ ನಿಮಗೆ ಮಗಳಂತೆ. ನಿಮ್ಮ ಹುಡುಗ ನನಗೆ ನಂತೆಯೆ' ಎಂದು ಹೇಳಿ ವರನನ್ನು ಮನೆಗೆ ಕರೆತರುತ್ತಾನೆ. ಮನೆಯ ಬಾಗಿ ೇ ಅವನಿಗಾಗಿ ಬಣ್ಣಬಣ್ಣದ ಧೋತರಗಳನ್ನು ಸಿದ್ಧಪಡಿಸಿಟ್ಟು ಮನೆಯ ಅಂಗಳ ಮಂಚದ ಮೇಲೆ ಕಸೂತಿ ಹಾಕಿದ ಹಾಸಿಗೆಯನ್ನು ಹಾಸಿಟ್ಟಿರುತ್ತಾರೆ. ಧೋತರ ನ್ನು ವರ ಧರಿಸಿಕೊಳ್ಳುತ್ತಾನೆ.

ಲಜ್ಜೆಯಿಂದಲೇ ಮದುಮಗ ಆ ಹಾಸಿಗೆಯ ಮೇಲೆ ಕುಳಿತುಕೊಳ್ಳುವನು. ಆಗ ಕಿ ಬಾಗಿಲುಗಳ ಸಂದಿನಿಂದ ಮನೆಯ ಹೆಂಗಸರು, ನೆರೆಹೊರೆಯವರು, ಅವನ ವೀ ಹೆಂಡತಿ ಅವನನ್ನು ಕದ್ದು ಕದ್ದು ನೋಡುತ್ತಾರೆ.

ಶೀಘ್ರವಾಗಿ ಮದುವೆ ನಡೆಯಬೇಕು. ಅದಕ್ಕಾಗಿ ಅಷ್ಟೇ ಅವಸರದ ಸಿದ್ಧತೆ. ತಿ ಮನೆಯಿಂದಲೂ ಅವಲಕ್ಕಿ ಮತ್ತು ಮೊಸರು ಸಂಗ್ರಹಿಸಿ ತರುತ್ತಾರೆ. ಮಿಥಿಲೆ ಲ್ಲಿ ಮೊಸರವಲಕ್ಕಿ ಎಲ್ಲಾ ಖಾದ್ಯಗಳಿಂದಲೂ ಶ್ರೇಷ್ಠವಾದುದು. ಮದುವೆಗೆ ಬಾಣ ುಸುಗಳಿಲ್ಲ, ವಾದ್ಯಘೋಷವಿಲ್ಲ. ಆದರೆ ಮದುವೆ ಮುಗಿಯುವವರೆಗೂ ಮಹಾಕವಿ ದ್ಯಾಪತಿ ರಚಿಸಿದ ಗೀತೆಗಳನ್ನು ಮುತ್ತೈದೆಯರು ಹಾಡುತ್ತಾರೆ. ಅಲ್ಲಿ ಯಾವ ಮಾರಂಭ ನಡೆಯುವುದಿದ್ದರೂ ವಿದ್ಯಾಪತಿಯ ಗೀತೆಗಳನ್ನು ಪಠಿಸುವುದು ಅನಿ ಾರ್ಯ ಅಂಗವೆನಿಸಿದೆ.

ದಿಬ್ಬಣದಲ್ಲಿ ಬರುವ ಬೀಗರು ಹನ್ನೊಂದು ಮಂದಿ ಮಾತ್ರ. ಅವರ ಸ್ವಾಗತ ಾಗಿ ಬಡಿಸುವ ಅಡಿಗೆಯಲ್ಲಿ ಒಂದಕ್ಕೂ ಉಪ್ಪು ಹಾಕುವುದಿಲ್ಲ. ಮೂರು ಹೊತ್ತು ಷ್ಕಳವಾಗಿ ಅವಲಕ್ಕಿ ಮೊಸರು ತಿಂದು, ಕನ್ಯೆಯ ತಂದೆ ಕೊಟ್ಟ ಗುಲಾಬಿ ವರ್ಣದ ೋತರವುಟ್ಟುಕೊಂಡು ಅವರು ತಮ್ಮ ಊರಿಗೆ ಹಿಂದಿರುಗುತ್ತಾರೆ.

ಆದರೆ ವರ ಮೂರು ದಿನಗಳ ಕಾಲ ಉಪ್ಪು ಹಾಕದ ಆಹಾರ ಸೇವಿಸುತ್ತಾ ಾವನ ಮನೆಯಲ್ಲೇ ಇರುತ್ತಾನೆ. ರಾತ್ರಿ ಸತಿ-ಪತಿಯರು ಒಂದೇ ಕೊಟಡಿಯಲ್ಲಿ ಳಿಯುವವರಾದರೂ ಮೂರು ದಿನಗಳವರೆಗೆ ಕಠಿಣ ಬ್ರಹ್ಮಚರ್ಯೆಯನ್ನೇ ಪರಿಪಾಲಿಸ ೇಕಾಗುತ್ತದೆ. ಅವರು ಮಾತನಾಡುವುದಕ್ಕೂ ಆಸ್ಪದವಿಲ್ಲ.

ನಾಲ್ಕನೆಯ ದಿನದಂದು ನಡೆಯುವ ವರನ 'ಸೌಜನ್ಯಗ್ರಾಸ' ತುಂಬ ಮಹತ್ವ ೂರ್ಣವಾದುದು. ದೊಡ್ಡ ತಾಟನಲ್ಲಿ ಪರಿಮಳದ ಅಕ್ಕಿಯ ಅನ್ನ ಬಡಿಸಿ, ಘಮ

ಘೆವು ತುಪ್ಪ ಹಾಕಿದ ಸಾರು ತಂದಿಡುತ್ತಾರೆ. ಊರವರಿಂದ ಶೇಖರಿಸಿ ತಂದ
ದೊನ್ನೆಗಳನ್ನು ತಾಟಿನ ಸುತ್ತಲೂ ಇಡುತ್ತಾರೆ. ಹಾಗೆ ದೊನ್ನೆಗಳನ್ನಿಡದಿದ್ದರೆ
ಊಟ ಪರಿಪೂರ್ಣವೆನಿಸಲಾರದಂತೆ. ಈ ಭೋಜನ ಕ್ರಮ ನಿಜಕ್ಕೂ ನೋಡು
ಹದು.

ನಾಲ್ಕನೆಯ ದಿನ ರಾತ್ರಿ ವರನೊಂದಿಗೆ ಪಾಲಕಿಯಲ್ಲಿ ಕುಳಿತುಕೊಂಡು
ಪತಿಗೃಹಕ್ಕೆ ಹೊರಡುತ್ತಾಳೆ. ಹೊಸ ವಸನಗಳಿಂದ ಅಲಂಕೃತನಾದ ವರನ
ರೀಯಕ್ಕೆ ವಧುವಿನ ಸೆರಗನ್ನು ಗಂಟು ಹಾಕುತ್ತಾರೆ. ಇಬ್ಬರೂ ಪಾಲಕಿಯಲ್ಲಿ ಕು
ಕೊಳ್ಳುತ್ತಾರೆ.

ಪ್ರತಿ ವರ್ಷ ಸಾವಿರಾರು ಕನ್ಯಾಪಿತೃಗಳು ಈ ಸ್ವಯಂವರಕ್ಕೆ ಬರುತ್ತಾರೆ.
ವರ್ಷ ೭೫ ಜೋಡಿಗಳಿಗೆ ಸಂಬಂಧ ಕುದುರಿತು.

ದರಭಂಗಾದ ಮಹಾರಾಜ ರಾಘವಸಿಂಹ (೧೭೦೧–೧೭೩೯) ತನ್ನ ಆಡ
ಕಾಲದಲ್ಲಿ ಸೌರಾತ್ ಹಳ್ಳಿಯಲ್ಲಿ ಈ ಪದ್ಧತಿಯನ್ನಾರಂಭಿಸಿದ. ಸ್ವಯಂವರ ನಡೆಯು
ಮೈದಾನದ ಪಕ್ಕದಲ್ಲಿ ಒಂದು ಶಿವಾಲಯವಿದೆ. ಮಹಾರಾಜ ಛತ್ರಸಿಂಹ ಕಟ್ಟ
ಧರ್ಮಶಾಲೆ, ಕೆರೆ, ಬಾವಿಗಳೂ ಇವೆ.

ತ್ರೇತಾಯುಗದಲ್ಲಿ ಶ್ರೀ ರಾಮನ ಸತಿ ಈ ಊರಲ್ಲೇ ಹುಟ್ಟಿದಳೆಂದು ಮಿಥಿ
ಪ್ರಾಚೀನ ಇತಿಹಾಸವಿದೆ. ಮಿಥಿಲೆಯ ಸುವರ್ಣಯುಗದಲ್ಲಿ ಭಾರತದ ಎಲ್ಲೆಡೆಯಿಂ
ವಿದ್ವಾಂಸರೂ ತತ್ವಜ್ಞಾನಿಗಳೂ ಇಲ್ಲಿಗೆ ಬರುತ್ತಿದ್ದರು. ಇಲ್ಲಿಗೆ ಆಗಮಿಸುತ್ತಿ
ವಿದ್ಯಾರ್ಥಿಗಳ ಸಂಖ್ಯೆಯೂ ಅಧಿಕವಾಗಿತ್ತು. ಈ ವಿದ್ಯಾರ್ಥಿಗಳ ಕೈ ಹಿಡಿಯ
ಬ್ರಾಹ್ಮಣ ಕನ್ಯೆಯರು ಪರಿತಪಿಸುತ್ತಿದ್ದರು. ಅದಕ್ಕಾಗಿ ವಿದ್ವಾಂಸರ ಸಭೆಗಳ
ವಿದ್ವತ್ ಪರೀಕ್ಷೆಗಳನ್ನು ನಡೆಸಿ, ಆದರಲ್ಲಿ ಗೆದ್ದವರಿಗೆ ಬ್ರಾಹ್ಮಣ ತರುಣಿಯರನ್ನು ಬ
ಮಾನವಾಗಿ ಕೊಡುತ್ತಿದ್ದರು.

ಆದರೆ ಈ ಬಗೆಯ ಪರಂಪರೆ ಈಗ ಇಲ್ಲ. ಇಲ್ಲಿ ಕನ್ಯಾ ಸ್ವಾತಂತ್ರ್ಯ ಇ
ತಂದೆ ನಿಶ್ಚಯಿಸಿದ ವರನನ್ನೇ ಹುಡುಗಿ ವರಿಸಬೇಕು. ವರನ ಆಯ್ಕೆ ಸೌರತ್ ಸಭ
ದಲ್ಲಿ ಮಾತ್ರ ನಡೆಯುತ್ತದೆ.

ಈ ಕಾರ್ಯಕ್ರಮಕ್ಕೆ ಜಿಲ್ಲಾ ಆಡಳಿತವೂ ನೆರವಾಗಿದೆ. ಅಲ್ಲಿ ನೆರೆಯುವವರಿ
ನೀರು, ವಿದ್ಯುತ್, ವಿಶೇಷ ಸಾರಿಗೆ ಸೌಲಭ್ಯಗಳನ್ನು ಒದಗಿಸುತ್ತದೆ. ಸುಭದ್ರ
ಗಾಗಿ ಒಂದು ಪೊಲೀಸ್ ಪಡೆ, ಒಬ್ಬ ಮ್ಯಾಜಿಸ್ಟ್ರೇಟ್ ಮತ್ತು ಒಂದು ಸಶಸ್ತ್ರ ಪ
ಕೂಡ ಬೀಡುಬಿಡುತ್ತದೆ.

ವರದಕ್ಷಿಣೆ ಮತ್ತು ಬಾಲ್ಯವಿವಾಹ ವಿರೋಧಿ ಕಾರ್ಯಕ್ರಮ ಪ್ರಚಾರ, ಚಲ
ಚಿತ್ರ, ಛಾಯಾಚಿತ್ರಗಳ ಪ್ರದರ್ಶನವೂ ಅಲ್ಲಿ ನಡೆಯುತ್ತವೆ. ವಿವಾಹ ಪದ್ಧ
ಯಲ್ಲಿನ ಅನಿಷ್ಟ ಅಂಶಗಳ ಕುರಿತು ಶಾಲೆಗಳಲ್ಲಿ ಚರ್ಚಾ ಸ್ಪರ್ಧೆಗಳೂ ಏರ್ಪಡುತ್ತವೆ.

ಕುಮಾರವ್ಯಾಸನ

# "ಶ್ರೀಕೃಷ್ಣ ರಾಯಭಾರ" ವೈಭವ

(ಕಿರು ಅವಲೋಕನ)

—ಎನ್. ಎಸ್. ಗಡಗಕರ

ಭಾರತವನ್ನು ವ್ಯಾಸರು ಸಂಸ್ಕೃತದಲ್ಲಿ ವಿರಚಿಸಿದುದು ನಮಗೆಲ್ಲ ಗೊತ್ತು. ಕನ್ನಡದಲ್ಲಿ ಅದು ಸುಲಭವಾಗಿ ಸಾಮಾನ್ಯರ ಹೃದಯ ಮುಟ್ಟಲೆಂದು ನಾರಣಪ್ಪನು ನಿರೂಪಿಸಿದನು. ಕುಮಾರವ್ಯಾಸ ಎಂಬ ಹೆಸರು ಈ ಗದುಗಿನ ವೀರ ನಾರಾಯಣ ಸ್ವಾಮಿಯ ಕಿಂಕರನಿಗೆ ಪರಿಶೋಭಿಸುವುದು. ಪ್ರಸ್ತುತ ಶ್ರೀಕೃಷ್ಣ ರಾಯಭಾರಿತ್ವ ಉದ್ಯೋಗ ಪರ್ವದ್ದು.

ಗದುಗಿನ ಭಾರತವು ಕನ್ನಡ ಸಾಹಿತ್ಯ ಕೃತಿಗಳಲ್ಲಿಯೇ ಅನರ್ಘ್ಯ ರತ್ನ ಎಂಬಲ್ಲಿ ಸಂದೇಹವಿಲ್ಲ. ಅದು ನಿಜಕ್ಕೂ ಕಾವ್ಯಗಳಿಗೆ ಗುರು.

ಕೌರವರಾಯನು ಶ್ರೀ ಕೃಷ್ಣನಿಂದ ತನಗೆ ಅನುಕೂಲ ಮಾಡಿಕೊಳ್ಳಬೇಕೆಂದು ದ್ವಾರಕಾವತಿಗೆ ಹೊರಟನು. ಇದನ್ನು ತಿಳಿದ ಧರ್ಮರಾಜನು ಅರ್ಜುನನ್ನು ಅದೇ ಉದ್ದೇಶದಿಂದ ಕಳಿಸಿದನು. ಅವನು ಶ್ರೀ ಕೃಷ್ಣನನ್ನು ಪರಮ ಭಕ್ತಿಯಿಂದ ಸ್ತೋತ್ರ ಮಾಡುತ್ತಾ ಅರಮನೆಯನ್ನು ಪ್ರವೇಶಿಸಿದನು. ಶ್ರೀಹರಿ ನಿದ್ರಾಲೋಲನಾಗಿದ್ದುದರಿಂದ ಎಚ್ಚರಿಸಲಾಗದೆ ಅವನ ಪಾದದ ಬಳಿ ಕುಳಿತನು. ಸ್ವಲ್ಪ ಹೊತ್ತಿನಲ್ಲಿಯೇ ಕಾಲು ದಿಸೆಯಲ್ಲಿಯ ಅರ್ಜುನನನ್ನೂ ಅನಂತರ ತಲೆಯ ಬಳಿಯಲ್ಲಿದ್ದ ಸುಯೋಧನನನ್ನು ನೋಡಿದನು. ಉಪಚಾರದ ನಂತರ ಬಂದ ಕಾರ್ಯ ಕೇಳಲು ಸಹಾಯಕ್ಕೆ ಒಪ್ಪಿದನು. ಮೊದ ಮೊದಲು ಸೋದರರ ವ್ಯಾಜ್ಯ ಬಗೆಹರಿಸಲು ಹವಣಿಸಿದನು. ಆದರೆ ದುರ್ಯೋಧನನು ಯುದ್ಧದ ಹಟ ಹಿಡಿದುದರಿಂದ ನಿರುಪಾಯನಾದನು. ಕೊನೆಗೆ ಯಾದವ ಮಹಾಸೇನೆಯನ್ನು ಕೌರವರಾಯನು ಬೇಡಿಕೊಂಡನು. ಬಡವರಾದ ನಮಗೆ ನೀವೆ ಬೆಂಬಲವಾಗಿರೆಂದು ಅರ್ಜುನನು ಬಿನ್ನವಿಸಲು ಕೃಷ್ಣನು ಅದಕ್ಕೆ ಒಪ್ಪಿದನು. ಏನಿದ್ದರೂ ಅವನು ಶರಣ ದೈಹಿಕ ದೇವ. ತನ್ನ ಬಿರುದನ್ನು ಎಂದೂ ಹುಸಿಹೋಗಗೊಡುವನಲ್ಲ. ದುರ್ಯೋಧನನೊಡನೆ ರಾಯಭಾರ ನಡೆಸಿ ಯುದ್ಧ ತಪ್ಪಿಸಲು ಹೆಣಗಿದ. ಕೌರವರಾಯನ ಅರಮನೆಗೆ ಆ ನಿಮಿತ್ತದಿಂದ ಹೊರಟ ಅವನ ರೀತಿ ಅನುಪಮವೇ !

**ಕೋಮಲಾಂಗಿಯರು** :– ಮೊದಲು ಕೃಷ್ಣನು ವಿಧುರನ ಮನೆಗೆ ಬಂದನು. ಎಂತಹ ರೂಪ ಅವನದು ! ಸಿರಿಮೊಗ, ಕೆಂಧೂಳಿ ಸೋಂಕಿದ ಸಿರಿಮುಡಿ, ಕುಡಿ ಮೀಸೆ, ತರುಣ ತುಲಸಿಯ ಆಭರಣದ ಆ ದೇವನನ್ನು ಕಂಡು ವಿದುರ ಹರ್ಷಾತಿ

ರೇಕದಲ್ಲಿ ಹುಚ್ಚೆದ್ದು ಹರಿದ. "ಅದಿರಲಿ ನನ್ನ ಹಸಿವೆಯ ಪರಿವೆ ನಿನಗಿಲ್ಲ" ಎಂದು ನುಡಿದು ಅಡುಗೆಯ ಮನೆಯಲ್ಲಿಯ ಹಾಲನ್ನು ಕುಡಿದು ಹಸಿವೆ ನೂಕಿಸಲು ಹವಣಿಸಿದ. ಈ ಗಲಭೆಯಲ್ಲಿ ಸೂರಾಡಿದ ಹಾಲು ಸಾಗರವಾಗಿ ನಗರ ವ್ಯಾಪಿಸಿ ಕೌರವ ರಾಯನ ಅರಮನೆಕೂಡ ಮುಟ್ಟಿತು. ಎಂಥ ಪವಾಡ ! ಅಚ್ಚರಿಗೊಂಡ ಭೀಷ್ಮಾದಿಗಳು ಮುರಹರನನ್ನು ಮನವಾರೆ ಹೊಗಳಿದರು.

ಅನಂತರ ಶ್ರೀಹರಿ ಕುಂತಿದೇವಿಯನ್ನು ಕಂಡು ಯೋಗಕ್ಷೇಮ ವಿಚಾರಿಸಿದನು. ಆಕೆ ಪ್ರತಿಯಾಗಿ ಯಾದವ ಕುಲದ ಸುಕ್ಷೇಮ ವಿಚಾರಿಸಿದಳು. ಎಲ್ಲ ವಿವರಿಸಿ ಕೃಷ್ಣನು ತನ್ನ ರಾಯಭಾರಿತ್ವದ ವಿಚಾರ ಅರುಹಿದನು. ಕುಂತಿ ಹಿಗ್ಗಿದಳು.

ಕುರುರಾಯನ ಆಸ್ಥಾನಕ್ಕೆ ಮರುದಿನ ಶ್ರೀ ಕೃಷ್ಣನ ಸಂದರ್ಶನವಿದ್ದಿತು. ಧೃತರಾಷ್ಟ್ರ ಭೂಪಾಲ ಅಂದು ಸತಿ ಸಹಿತ ಸಿಂಹಾಸನದಲ್ಲಿದ್ದ, ಅನೇಕ ಮಾಂಡಲಿಕ ಅರಸರು ಎಡ ಬಲದಲ್ಲಿ, ಬಳಿಯಲ್ಲಿ ಸುಯೋಧನ, ಅವನ ಸೋದರರು, ಕರ್ಣ, ವಿದ್ವಾಂಸರೂ, ವೀರರೂ ಆ ಸಭೆಗೆ ಅಲೌಕಿಕ ಕಳೆ ತಂದಿರಿಸಿದ್ದರು. ಕುರುರಾಯನ ಆಸ್ಥಾನವು ಅಂಬುಜಮುಖಿಯರಿಂದ ಕೋಮಲಾಂಗಿಯರಿಂದ ಕಂಗೊಳಿಸುತ್ತಿತ್ತು.

**ರಾಜ ನೀತಿ :–** ಅಸುರಾರಿ ಕುರುರಾಯನ ಓಲಗಕ್ಕೆ ಬರುವ ಠೀವಿ ಅಪ್ರತಿಮಮವಾದುದು. ಇಭಪುರದ ಬೀದಿಗಳು ಜನ ಸಹಿತ ಪುನೀತವಾದವು. ರಾಜಾದಿ ರಾಜರ ಮುಕುಟಗಳು ಶ್ರೀಹರಿಯ ಪಾದಗಳನ್ನಾವರಿಸಿದಾಗ ಏನು ತೇಜ ! "ನಾವೆಲ್ಲ ಇಂದು ಧನ್ಯರು ಎಂದು ರಾಜಕುಲ ಹರ್ಷಿಸಿತು." ಆಗ ಭೀಷ್ಮರು ಪರಮಾತ್ಮನನ್ನು ಅರ್ಘ್ಯ ಪಾದ್ಯಗಳಿಂದ ಪೂಜಿಸಿದರು. ಸಮಸ್ತ ರಾಜರು ಜಯ ಜಯಕಾರಮಾಡುವಾಗ ಕುರುರಾಯನೊಬ್ಬ ತನ್ನ ಪೀಠದಲ್ಲಿದ್ದು, ಮಿಟ್ಟೆ ಮಿಸುಕಲಿಲ್ಲ. ಆಗ ಕೃಷ್ಣನು ಬೇಕಂತಲೆ-ಅವನಿಗೆ ವಿನಯ ಕಲಿಸಲು-ಧಾರುಣಿಯನ್ನು ಉಂಗುಟದ ತುದಿಯಿಂದ ಒತ್ತಲು ಕುರುರಾಯನ ರತ್ನ ಖಚಿತ ಸಿಂಹಾಸನದ ಪೀಠದ ಗೊಣಸು ಮುರಿಯಿತು. ಎಲ್ಲೆಡೆ ಹಾಹಾಕಾರ, ಕುರುರಾಯ ಇಳೆಗೆ ಉರುಳಿದ–ಪರಮಾತ್ಮನ ಪಾದತಲದಲ್ಲಿ ! "ಛೆ ! ನೀನು ಇಲ್ಲಿಗೆ ಬರುವ ಕಾರಣ ಇರಲಿಲ್ಲ. ನಾನೇ ಬರುತ್ತಿದ್ದೆ" ಎಂದು ನುಡಿದು ಅವನನ್ನು ಎತ್ತಿದನು. ಶ್ರೀಕೃಷ್ಣನು ಆಚಾರ ವಿಚಾರ ಅರಿತವ, ಕುರುರಾಯನ ಯೋಗಕ್ಷೇಮ ವಿಚಾರಿಸಿಕೊಂಡನು, ಸಮಾಧಾನ ಮಾಡಿದನು. ಆಗ ಅವನು ತನ್ನ ಚಿಂತೆಯನ್ನು ತಿಳಿಸಿದ- ; ಸ್ವಾಮಿ, ತಾವು ಬರುವಿರೆಂದು ನಾನು ವಿಜೃಂಭಣೆಯಿಂದ ಅಡುಗೆಯ ವ್ಯವಸ್ಥೆ ಗೊಳಿಸಿದ್ದೆ. ಬಾರದೆ ವಿದುರನ ಮನೆಯಲ್ಲುಂಡಿರಿ, ಎಷ್ಟಾದರೂ ನಿಮ್ಮದು ಕೆಳಮಟ್ಟದ ಸಂಸ್ಕೃತಿ. ಕೃಪ, ದ್ರೋಣ, ಭೀಷ್ಮರಲ್ಲಿ ಉಣ್ಣದೆ ತೊತ್ತಿನ ಮನೆಯಲ್ಲಿ ಉಂಡಿರಿ."- ಇದನ್ನು ಕೇಳಿ ವಿದುರನು ತಪ್ತನಾಗಿ ಮುಂದೆ ಕುರುಕ್ಷೇತ್ರ ಕಾಳಗ ಕಾಲಕ್ಕೆ ಸುಯೋಧನನ್ನು ಉಳಿಸಬೇಕೆಂದು

ಇರಿಸಿದ ಧನುವನ್ನು ಮುರಿದು ಚೆಲ್ಲಿದನು. ಎಲ್ಲರಿಗೂ ದುಃಖ ಆವರಿಸಿತು. ಕುರುರಾಯನ ದಡ್ಡತನಕ್ಕೆ ಶ್ರೀ ಕೃಷ್ಣನು ಹರ್ಷಿಸಿದ, ಮನದಿ ನಕ್ಕ. ಪಾಂಡವರ ಕುತ್ತು ಪರಿಹಾರವಾಯಿತೆಂದ. ಸ್ವತಃ ದುರ್ಯೋಧನನಿಗೆ ತನ್ನ ಮೂರ್ಖತನದ ಮಾತಿಗೆ ಪಶ್ಚಾತ್ತಾಪ ಆಯಿತು. ಆದರೆ ಮುತ್ತು ಒಡೆದುಹೋಗಿತ್ತು! ಕೊನೆಗೆ ಕೃಷ್ಣನು ತಾನು ಕುರುರಾಯನಲ್ಲಿ ಊಟಕ್ಕೆ ಬಾರದ್ದಕ್ಕಾಗಿ ಕಾರಣ ಉಸುರಿದನು-, " ನೀವು ಅಹಿತರು, ಅಪ್ರಿಯರು ಇಂತಹರಲ್ಲಿ ಉಣ್ಣಬಾರದೆಂಬ ರಾಜನೀತಿ ಉಂಟು ".

ತೃಪ್ತಿ ಇಲ್ಲ:– ೭೨ ನುಡಿಗಳ ಈ ಎಂಟನೆಯ ಸಂಧಿಯಲ್ಲಿ ಕುಮಾರವ್ಯಾಸನ ವರ್ಣನ ಶೈಲಿಗೆ ಹಲವಾರು ನಿದರ್ಶನಗಳು ದೊರೆಯುವವು. ಶ್ರೀ ಕೃಷ್ಣನು ವಿದುರನ ಮನೆಯ ಬಾಗಿಲಿಗೆ ಬರುವ ಪಾಂಗು ದರ್ಶನೀಯ.

ಸಿರಿ ಮೊಗದ ಕಿರುಬೆಮರ ತೇಜಿಯ
ಖುರ ಪುಟದ ಕೆಂದೂಳಿ ಸೋಂಕಿದ
ಸಿರಿ ಮುಡಿಯ ಕುಡಿ ಮೀಸೆಯಲಿ ಕೆಂಪಡರ್ದ ರೇಣುಗಳ
ಖರ ಮರೀಚಿಯ ಜಳಕೆ ಬಾಡಿದ
ತರುಣ ತುಲಸಿಯ ದಂಡೆಯೊಪ್ಪುವ
ಗರುವ ದೇವನ ಬರವ ಕಂಡನು ಬಾಗಿಲಲಿ ವಿದುರ ||

ಹಾಗೆಯೇ ಶ್ರೀ ಕೃಷ್ಣನ ಬರವು ವಿದುರನಲ್ಲಿ ಹರುಷದ ಹೊಳೆ ಹರಿಸಿತು. ಅವನು ಭಕ್ತಿಯ ಉತ್ಕಟತೆಯಲ್ಲಿ ಹುಚ್ಚೆದ್ದು ಹರಿದಾಡಿದ—

" ಕೂಡೆ ಕುಣಿದನು ಮನೆಯ ಮುರಿದೀ
ಡಾಡಿದನು ಮೈಮರೆದ ಹರುಷದ
ಗಾಡಿಕೆಯ ಲಪ್ರತಿಮನೆಸೆದನು ಬಹುತಿ ಕೇಳಿಯಲಿ "

ಕುಂತಿ ದೇವಿಗೆ ಆಕೆಯ ಪರಿವಾರದ ಯೋಗಕ್ಷೇಮ ಕೇಳುವುದು, ಆಕೆ ಪ್ರತಿಯಾಗಿ ಶ್ರೀ ಕೃಷ್ಣನ ಬಂಧು ವರ್ಗದ ಕುಶಲ್ಷೇಮ ಕೇಳುವುದು ಹೀಗೆ ಅನೇಕ ವಿವರಗಳನ್ನೊಳಗೊಂಡಿದೆ–ಈ ಸಂಧಿ. ಕೃಷ್ಣನು ಬರುವನೆಂಬ ಸುದ್ದಿ ತಿಳಿಯಲು ಏನು ವಿಜೃಂಭಣೆ ಕುರುರಾಯನ ನಗರದಲ್ಲಿ ಸಭಾಗೃಹದಲ್ಲಿ—

" ಜಾಳಿಸಿತು ತಮ ಮೂಡಣಾದ್ರಿಯ
ಮೇಲೆ ತಲೆದೋರಿದನು ರವಿ ಭೂ
ಪಾಲ ಕೌರವನಂದಿನೊಡ್ಡೋಲಗವ ರಚಿಸಿದನು "

ಕೌರವರಾಯನ ಸಭೆ-ಮಂತ್ರಿಗಳು, ತರ್ಕ ಪುರಾಣ ಕಾವ್ಯ ಪರಿಣತರು, ಚತುರ್ಭಾಷಾ ವಿಶಾರದ ಕವಿಗಳು, ವಾಗ್ಮಿಗಳು, ಗಮಕಿಗಳು, ಭಟ್ಟ ಸಂದೋಹ–ಇವುಗಳಿಂದ ಮೆರೆಯಿತು.

ಸುಯೋಧನನ ಅರಮನೆಗೆ ಬರುವ ಶ್ರೀ ಕೃಷ್ಣನ ಬರುವಿನಲ್ಲಿ ಕುಮಾರವ್ಯಾಸ ಅವನ ಚರಿತ್ರೆಯನ್ನೇ ಕಂಡ, ಕಂಜ ಸಂಭವ ಪಿತ, ನಂಜಿನಲಿ ಪವಡಿಸಿದವ, ಅಭಯ ದಾಯಿ ಅಂಜಿದವರಿಗೆ, ದೈತ್ಯಕುಲವನದಾವ, ಅಘಹಾರಿ, ಭಕ್ತವತ್ಸಲ ಕರುಣಿ ದುರಿತ ದುರ್ಗ ವಿಭಾಡ, ಕ್ಷೀರವಾರಿಧಿ ಶಯನ, ವಾರಿಜೋದರ–ಇನ್ನೂ ಎಷ್ಟು ಬಗೆ ಯಾಗಿ ಬಣ್ಣಿಸಿದರೂ ತೃಪ್ತಿ ಇಲ್ಲ.

ಕೊನೆಗೆ ತೀರ ನಾಟಕೀಯ ಸನ್ನಿವೇಶವೆಂದರೆ–ಧರಣಿಪತಿ ಸಿಂಹಾಸನದಿಂದ ಬೀಳುವುದು, ಅವನನ್ನು ಮುರವೈರಿ ಎತ್ತಿ ಸಮ್ಮಾನಿಸುವುದು. ಎಲ್ಲ ಪೂಜ್ಯರ ನಿಲ ಯಕ್ಕೆ ಹೋಗದೆ–ಕೃಪ, ದ್ರೋಣ, ಗಾಂಗೇಯ–ತೊತ್ತಿನ ಮಗ ವಿದುರನಲ್ಲಿ ಉಂಡುದು ಹೇಯ, ಗೊಲ್ಲರಂತಹ ಅಸಂಸ್ಕೃತರಿಗೆ ಒಪ್ಪುವುದು ಎನ್ನಲು, ವಿದುರನ ಕಣ್ಣು ಕಿಡಿ ಸೂಸಿದವು. ಕೌರವರಾಯರನ್ನು ಮುಂದೆ ಉಳಿಸಲು ಇರಿಸಿದ ಧನುವನ್ನು ಅವನು ಮುರಿಯಲು ಎಂಥ ಹಾಹಾಕಾರ !

" ಧನು ಮುರಿಯೆ ಗಾಂಧಾರಿ ಗತಲೋ
ಚನರು ಮಮ್ಮಲ ಮರುಗಿದರು ಭೂ
ಪನದಂಗಡ ಮಿಗಿಲಾಯ್ತು ಭೀಷ್ಮ ದ್ರೋಣರಳಲಿದರು "

ಆದಷ್ಟೇ ನೆಟ್ಟಗಾಯಿತೆಂದು ಮುರವೈರಿ ನಲಿದನಂತೆ! ನಿಮ್ಮಲ್ಲಿ–ನೀವು ಅಹಿತರು, ಅಪ್ರಿಯರು-ನಮ್ಮ ಊಟ ಅಸಂಭವ ಎಂಬ ನುಡಿಯಲ್ಲಂತೂ ಶ್ರೀ ಕೃಷ್ಣನ ಚಾಣಾಕ್ಷ ತನಕ್ಕೆ ಉಚಿತ ನಿದರ್ಶನ ದೊರೆವುದು.

**ಶಬ್ದಾಲಂಕಾರ ಅರ್ಥಾಲಂಕಾರ :** "ಸಂಭಾವನಮಥೋತ್ಪ್ರೇಕ್ಷಾ ಪ್ರಕೃತಸ್ಯ ಪರೇಣಯತ್" ಎಂಬುದಾಗಿ ಉತ್ಪ್ರೇಕ್ಷೆಯ ವ್ಯಾಖ್ಯೆ ಹೇಳುವುದುಂಟು. ಕುಮಾರವ್ಯಾಸನಿಗೆ ಈ ಅಲಂಕಾರ ಅತೀವ ಪ್ರಿಯ. ತೀರ ಲೀಲಾಜಾಲವಾಗಿ ಇದನ್ನು ಬಳಸಿ ವಾತಾವರಣದಲ್ಲಿ ಅವನು ರಂಗು ಹುಟ್ಟಿಸುವನು. ಚಮತ್ಕೃತಿಗೆ ಎಡೆಕಲ್ಪಿಸಿ ಕೊಡುವನು. ಶಶಿಯ ಬಿಂಬವ ಹಳಿವ ಹುರುಡಿಸುವಂಬುಜಮುಖಿಯರು, ಕೌರವ ವಾರಿಧಿಯ ಮುಕ್ಕಳಿಸಲೋಸುಗ ಬಂದ ಧಾರುಣಿಯ ಜೊರೆಯಿಳಿಸಲೋಸುಗ ಬಂಧ ಮರಿಮಿಂಚುಗಳ ಮುಗಿಲಿಳಿವಂತೆ ಭೂತಳಕೆ–ಕೆಲವು ನಿದರ್ಶನಗಳು. ಇದೇ ಮೇರೆಗೆ ನಿರಾಯಾಸವಾಗಿ ಕವಿ ಅತಿಶಯೋಕ್ತಿಗೆ ಮೊರೆ ಹೋಗುವದುಂಟು. "ಮನೆಯ ಮುರಿದೀಡಾಡಿದನು ಹರುಷದಲಿ ವಿದುರ, ಕರಣದಲಿ ಕೋಪಾಗ್ನಿ ಉಕ್ಕಲು, ತತ್ಸಭಾ ಮಂಡಲ ಮಹಾಂಬುಧಿ ನುಡಿದೆರೆಯ ತನಿಗಡಲವಡಗಿರಲು"–ಕೆಲವು ಮಾದರಿ.

ಶಬ್ದಾಲಂಕಾರಗಳಿಗಂತೂ ಕೊನೆ ಇಲ್ಲ. ಕಾಣಿಕೆಯ ಕೊಂಡನು ಕೊಟ್ಟ ನುಡುಗೊರೆಯ, ಸಿರಿಮೊಗದ ಕಿರುಬೆಮರ, ಗರುವದೇವನ ಬರವ, ಕಲಿಮಲದಿ ಹೊಲಗಲಸಿ, ಅಂಜಿದಸುರನಿಗಭಯ, ಭಂಜನೆಗೆ ಬಲುದೇವ ಬಂದನು ದುರಿತದುರ್ಗ

ನಿಭಾಡ ಬಂದನು, ನೀಲಾಚಲನಿಕಾಯ, ತತ್ಕುಮತಿ ಕೌರವ, ಮಣಿಯದಾತನ ಕಾಣುತ, ಹಸಿವನೊಂಕಿದನು ಹಾಲಲಿ, ಬಿಸಜಲೋಚನ ಬಿನ್ನಪ, ಕುರುಪತಿಯ ಬಿರುನುಡಿ, ತೊಳೆದ ದಶನ ಮಯೂಖತತಿ ಹೊಳೆಹೊಳೆಯೆ"-ಇತರ ನಿದರ್ಶನಗಳೆಂದು ಅರುಹಬಹುದು.

**ಸಜೀವ ನಿರ್ದೇಶನ :–** ಹೀಗೆ ಈ ರಾಯಭಾರಿ ಪ್ರಸಂಗದಲ್ಲಿ ನಾವು ಕುಮಾರವ್ಯಾಸನ ನಿರೂಪಣಾ ಜಾಣ್ಮೆಯನ್ನು ಅವಲೋಕಿಸಿ ಹರ್ಷಿಸುವೆವು. ಮುಖ್ಯ ವಾಗಿ ಇವನು ಭಕ್ತಿರಸದ ಪುರಸ್ಕರ್ತ. ಶ್ರೀಕೃಷ್ಣನ ಬಗೆಗೆ ಇವನಿಗೆ ಅಲೌಕಿಕ ಗೌರವ. ಅವನ ಬಿರುದುಗಳನ್ನು ಏನೆಂದು ಎಷ್ಟೆಂದು ಹೊಗಳಿದರೂ ತೃಪ್ತಿ ಇಲ್ಲ. ಕುಮಾರವ್ಯಾಸನು ಬರಿ ವೇದಾಭ್ಯಾಸ, ಪಾಂಡಿತ್ಯ ಜಡನಲ್ಲ. ಅವನು ತತ್ವಜ್ಞಾನಿ ನಿಜ, ಆದರೆ ಲೌಕಿಕವನ್ನು ಅರಿತ ಕುಶಲ ರಾಜಕಾರಿಣಿ. ಅಲ್ಲಿ ವಕ್ರತೆ, ವಿಡಂಬನೆ, ವಂಚನೆಗೆ ಎಡೆ ಇಲ್ಲ. ರಾಜನೀತಿಯ ತತ್ವಗಳು ಈ ಸಂಧಿಯಲ್ಲಿ-ಕೌರವರಾಯನ ಸಭೆಗೆ ಬಂದಾಗ - ನಮಗೆ ವಿದಿತವಾಗುವವು. ಕಾವ್ಯ ಗುಣದೊಡನೆ ನಾಟಕೀ ಯತೆ, ಚಿತ್ರಕ - ಶಕ್ತಿ ಕವಿಗೆ ವಶವರ್ತಿ ಆಗಿವೆ. ಶಬ್ದಾಲಂಕಾರ, ಅರ್ಥಾಲಂಕಾರ ಗಳಂತೂ ಸೂರಿ! ಮನುಕುಲದ ಹೃದಯ ಅರಿತ ಮಹಾನುಭಾವ ಕುಮಾರ ವ್ಯಾಸ. ಪ್ರಸ್ತುತ ರಾಯಭಾರತ ಸಂಧಿ ಅದಕ್ಕೆ ಸಜೀವ ನಿದರ್ಶನ.

---




ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುಃ ಆತ್ಮೈವ ರಿಪುರಾತ್ಮನಃ ॥

ತನ್ನಿಂದಲೇ ತನ್ನನ್ನು ಉದ್ಧಾರ ಮಾಡಿಕೊಳ್ಳಬೇಕು. ತನ್ನನ್ನು ಅವನತಿ ಗೊಯ್ಯಬಾರದು. ತನ್ನ ಮನಸ್ಸೆ ತನಗೆ ನೆಂಟನು. ತನ್ನ ಮನಸ್ಸೇ ತನಗೆ ಶತ್ರುವು.



# ಕಾವ್ಯ ವಾಹಿನಿ

## ಮುಚ್ಚಿಕೋ ಮುಚ್ಚಿ

ಪ್ರೊ. —ಸುಂದರ ನಾಡಕರ್ಣಿ
ಗುಜರಾತ್.

ಮುಚ್ಚಿದ್ದ ಕಣ್ಣುಗಳ
ಎವೆಯು ದಾರಗಳಿಂದ
ಜಗವ ಸೆರೆಹಿಡಿವ ಆಟ
ನಾ ಬಲ್ಲೆ
ಝುಲ್ಲೆಂಬ ಮಿಡಿತದಲಿ
ಮುರದ ಮನ್ಮಥ ಕೇಳಿ,
ಸಗ್ಗ ಅಗ್ಗನ ಗಂಟು
ನನ್ನ ಬಳಿ ಆಗ.
ಕಣ್ಣು ತೆರೆದ ಕ್ಷಣ
ಅಕ್ಷಯವು ಕ್ಷಯವಾಗಿ
ಕ್ಷಣ ಕ್ಷಣಕೂ ಸಣ್ಣಾಗಿ
ನಂದನವು ಆಗುವದು
ನೋಡಲಾಗದ ನರಕ.

ಸುಪ್ತರಾಗದ
ಸ್ವರ ಸಪ್ತಕದ ಮಧುರ
ತಂತಿಗಳು ಝೇಂಕರಿಸಿ
ಜೀವ ಲಾಸ್ಯದ ಲಹರಿ
ರಮ್ಯ ಸಿಂಚನದ
ಕರ್ಣಾಮೃತವಾಗುವದು
ಕಿವಿಗಳೆರಡನು ಮುಚ್ಚಿ ಇಟ್ಟ ಬಳಿಕ.
ತೆರೆದ ಆಕ್ಷಣ
ನುಗ್ಗಿ ಬರುವದು
ಕರ್ಮಾರನ ತಿರು ಬಡಿತ

ತಾಳ ತಪ್ಪಿದ ಗುಲ್ಲು
ಬೇಸೂರ ಬಾದಶಹರೊಟ್ಟಾಗಿ
ಕೂಡುವರು
ಕರ್ಕಶದ ಮೇಳ ಸಹಿತ.

ಬಾಯಿ ಮುಚ್ಚಿದ್ದ ಕ್ಷಣ
ಶಬ್ದವಿಲ್ಲದ ಶಾಂತಿ
ಮೌನದ ಮೆರಗಿನಲಿ
ಮೈ ತಳೆದು ಚಿನ್ಮಯದು
ಆತ್ಮ ಶುದ್ಧಿಯು ಸೆಲೆಯು
ಶಬ್ದ ಕೋಶ.
ಬಾಯಿ ತೆರೆದರೆ ಬಂತು
ಮನದ ಸಂಚಿತ ಸೇಡು
ಪೊಳ್ಳು ಆಡಂಬರದ
ಎಚ್ಚತ್ತ ಕನವರಿಕೆ
ಮಾತಿನ ಹೆಸರಿನಲಿ
ಶಬ್ದ ಸಾಂಬನ ಹೆರಿಗೆ.

ಈ ಮೂರು ದ್ವಾರಗಳ
ಮುಚ್ಚಿರೋ ಮುಚ್ಚಿ
ಕಣ್ಣು ಹಿಡಿತದ ಸ್ವರ್ಗ ಕೈ ತಪ್ಪುವಲ್ಲಿ
ಗಂಧರ್ವ ಗಾನದ ಸವಿಯ ರಾಗ
ಕೆಡುವಲ್ಲಿ,
ದೇವ ಭಾಷೆಯಲ್ಲಿ ವ್ಯರ್ಥ ಹಳಸುವಲ್ಲಿ.

# ವಿಜಯನಗರದ ರಾಯರಕಾಲದಲ್ಲಿ ಶಿಕ್ಷಣದ ರೀತಿ ನೀತಿಗಳು.

—ಎಸ್. ಜೇವೂರ್
(ಡಿ. ಡಿ. ಪಿ. ಐ)

ವೀರಶೈವರಿಗೆ ಉಳಿದ ಜಾತಿಯವರಿಗಿದ್ದಷ್ಟು ಭವ್ಯವಾದ ಗುಡಿಗಳಿದ್ದಿಲ್ಲ ವೆಂಬುದು ನಿಜ. ಅವರಿಗೆ ಆಶ್ರಯಸ್ಥಾನವೆಂದರೆ, ಅವರ ಮಠಗಳು. ಅಲ್ಲಿ ಅವರ ಗುರುಗಳು ವಾಸಿಸುತ್ತಿದ್ದರು. ಲಿಂಗಾಯತರ ಪದ್ಧತಿಯಲ್ಲಿ ಧರ್ಮವೂ ಶಿಕ್ಷಣವೂ ಓತಪ್ರೋತವಾಗಿ ಬೆರೆತುಹೋಗಿತ್ತೆಂಬ ಒಂದು ಮಾತಿನಿಂದ ಈ ವಿಷಯವನ್ನು ಮುಗಿಸಿಬಿಡಬಹುದು.

ಇವರ ಧರ್ಮದ ಕೆಲವು ಪದ್ಧತಿಗಳನ್ನು ಈ ಸಮಯದಲ್ಲಿ ತಿಳಿಸಬಹುದು. ಶಿಶುವು ಜನಿಸಿದೊಡನೆಯೇ ಕುಟಂಬದ ಗುರುವು ಆಗಮಿಸಿ, ಲಿಂಗಕಟ್ಟುವ ವಿಧಿಯನ್ನು ನೆರವೇರಿಸುವನು. ಇದು ಬ್ರಾಹ್ಮಣರ ಉಪನಯನ ಸಂಸ್ಕಾರವನ್ನು ಹೋಲುವಂತಿದೆ. ಇತ್ತೀಚಿನ ಕಾಲದಲ್ಲಿ ಈ ಸಂಸ್ಕಾರವು ಎಂಟನೆಯ ವಯಸ್ಸಿನಲ್ಲಿ ಜರಗತಕ್ಕದ್ದೆಂಬಮಾತು ವಿವಾದಾಸ್ಪದವಾಗಿದೆ. ಆರ್ಯನ್ನರ ಸಂಸ್ಕೃತಿಯ ಮೇಲೆ ಆಸ್ಥೆಯುಳ್ಳವರು ಈ ದೀಕ್ಷಾವಿಧಿಯು ಕುಮಾರನ ಎಂಟನೆಯ ವಯಸ್ಸಿನಲ್ಲಿ ನೆರವೇರತಕ್ಕದ್ದೆಂದು ಅಭಿಪ್ರಾಯಪಡುತ್ತಾರೆ.[26] ಆದರೆ ರೂಢಿಯಲ್ಲಿ ಬದುಕಿಕೊಂಡ ಪದ್ಧತಿಯೆಂದರೆ ಎಂಟನೆಯ ತಿಂಗಳು ಗರ್ಭಧಾರಣೆಯ ಸಮಯದಲ್ಲಿಯೇ ಗರ್ಭದೊಳಗಿನ ಕೂಸಿಗೆ ಲಿಂಗಧಾರಣೆಯ ಶಾಸ್ತ್ರಮಾಡಿ ಮುಗಿಸಬೇಕೆಂದೂ ಆ ಧರ್ಮದವರು ನಂಬಿ

---

26 ಆಗಮಗಳ ರೀತ್ಯಾ ಎಲ್ಲವರ್ಗಗಳ ವಿದ್ಯಾರ್ಥಿಗಳು ಒಂದು ತೆರನಾದ ಮಾಸಿಕ ಬೆಳವಣಿಗೆಯನ್ನು ಹೊಂದಿರುವುದಿಲ್ಲ ಈ ಆಧಾರದಮೇಲೆ ಚೆನ್ನಬಸವಣ್ಣನವರು ಉಪದೇಶವನ್ನು " ಬ್ರಾಹ್ಮಣಂ ತ್ರೀಣಿವರ್ಷಾಣಿ, ಕ್ಷತ್ರಿಯಂ ವರ್ಷಷಟ್ಸುಚ ವೈಶ್ಯಂತು ನವವರ್ಷಾಣಿ ಶೂದ್ರಂ ದ್ವಾದಶವರ್ಷಕಂ " ಎಂದರೆ 3 ನೆಯ ವರ್ಷ ಬ್ರಾಹ್ಮಣನಿಗೂ, 6ನೆಯ ವರ್ಷ ಕ್ಷತ್ರಿಯನಿಗೂ, 9ನೆಯ ವರ್ಷ ವೈಶ್ಯನಿಗೂ, 12ನೆಯ ವರ್ಷ ಶೂದ್ರನಿಗೂ ಮಾಡಬೇಕೆಂದಿದ್ದಾರೆ. ಆದರೆ ಚೆನ್ನಬಸವಣ್ಣನವರು ಜಾತಿಯ ಪದ್ಧತಿಯನ್ನೂ ನಂಬಿರಲಿಲ್ಲ ಕಂಡುಬರುವುದು ( ವಚನಶಾಸ್ತ್ರಸಾರ I ಮೊದಲಿನ ಅರ್ಧ ಪು. 93)

ದ್ದಾರೆ. ಗುರುವು ಲಿಂಗದೀಕ್ಷಾ ವಿಧಿಯ ಸಂದರ್ಭದಲ್ಲಿ ತಾಯಿಯಾದವಳ ಕಿವಿಯ ಲ್ಲಿಯೇ ಮಂತ್ರೋಚ್ಚಾರಮಾಡಿ ಲಿಂಗವನ್ನು (ಶಿಶುವಿಗೆ ಕಟ್ಟಿದ ಲಿಂಗವನ್ನು) ಅವಳ ಕೈಗೆ ಕೊಡುತ್ತಾನೆ. ಮಂತ್ರೋಚ್ಚಾರ ಮಾಡುವಾಗ "ಕುರುರ್.... ಕು ಕುರುರ್...." ಎಂಬ ಸ್ವರ ತೆಗೆಯುತ್ತಾನೆ. ಈ ಪದ್ಧತಿಯು ಮನಶ್ಶಾಸ್ತ್ರದ ತತ್ತ್ವವನ್ನು ಹೋಲುತ್ತದೆಂದು ಹೇಳಬಹುದು. ಯಾಕೆಂದರೆ ಕೂಸು ಬಿಳಿಯ ಹಾಳೆಯಂತಿರುವ ಮೆದುಳಿನಿಂದ ಕೂಡಿರುವುದಿಲ್ಲ—ಎಂಬ ಮಾತಿನ ನಿರ್ಣಯವನ್ನೂ ಈ ಪದ್ಧತಿಯ ಮೇಲಿಂದ ಒಪ್ಪಿಕೊಂಡಿದ್ದರೆಂದು ತೋರುವುದು.

ಆಗಿನಕಾಲದಲ್ಲಿ ಜಂಗಮರು ಸಾಕಷ್ಟು ವಿದ್ಯಾಸಂಪಾದನೆ ಮಾಡಿದವರಾಗಿರುತ್ತಿದ್ದರು. ಅವರು ವಂಶಪಾರಂಪರ್ಯವಾಗಿ ಶಿಕ್ಷಕನ ಕೆಲಸವನ್ನೇ ಮಾಡುತ್ತ ಬಂದವರಾಗಿರುತ್ತಿದ್ದರು. ಅವರು ಧಾರ್ಮಿಕ ಉಪದೇಶವನ್ನು ಮಾಡುವುದರ ಜೊತೆಗೆ ಶಾಲೆಯ ಶಿಕ್ಷಕರಾಗಿಯೂ ಕೆಲಸ ಮಾಡುತ್ತಿದ್ದರು. ಅವರು ತಮ್ಮ ಭಕ್ತರ ಮನೆಗಳಿಗೆ ಹೋದಾಗ ಅಲ್ಲಿಯ ಮಕ್ಕಳನ್ನು ವಿಚಾರಿಸಿ ಕೊಂಡು ಪರೀಕ್ಷಿಸುತ್ತಿದ್ದರು. ಇದರಿಂದ ಇವರು ಈಗಿನ ಶಾಲಾ ತನಿಖಾಧಿಕಾರಿಗಳ ಕೆಲಸವನ್ನು ಸಹಜವಾಗಿಯೇ ಸಾಗಿಸುತ್ತಿದ್ದರೆಂದು ಹೇಳಬಹುದಾಗಿದೆ. ಅವರು ಎಲ್ಲೆಲ್ಲಿ ಸಂಚಾರ ಹೊರಡುತ್ತಿದ್ದರೋ ಅಲ್ಲಲ್ಲಿ ಒಳ್ಳೊಳ್ಳೆಯ ಪುಸ್ತಕಗಳನ್ನು ಸಿಫಾರಸು ಮಾಡುತ್ತಿದ್ದರು. ಅದರಿಂದ ಅವರ ತಲೆಯು ಜ್ಞಾನಭಂಡಾರದ ಭಾರದಿಂದ ಹಗುರಾಗುತ್ತಿದ್ದಿತು. ಅವರಿಗೆ ಪ್ರತ್ಯೇಕವಾದ ಶಾಲೆ ಕಾಲೇಜುಗಳಿರಲಿಲ್ಲ. ಈ ಸಂಚಾರೀ ಶಿಕ್ಷಕವರ್ಗವೇ ಹಳ್ಳಿಯೊಳಗಿನ ಶಿಕ್ಷಕರು. ಉದಾತ್ತವಾದ ತಳಹದಿಯ ಮೇಲೆ ನಿಲ್ಲಿಸಲ್ಪಟ್ಟಂಥ ಕರ್ನಾಟಕ ದೊಳಗಿನ ವಿದ್ಯಾಕೇಂದ್ರಗಳು. ಜನಸಮೂಹಕ್ಕೂ ಒಳ್ಳೆಯ ಕಾರ್ಯವನ್ನು ಮಾಡುವಂಥ ಸಂಸ್ಥೆಗಳೆನಿಸಿದ್ದವು.

ಆ ಕಾಲ್ಲದಲ್ಲಿ ಪ್ರಾಚೀನ ಕಾಲದಲ್ಲಿ ಯಾರು ವಿದ್ಯೆಗೆ ಆಶ್ರಯಸ್ಥಾನ ವಾಗಿದ್ದರೋ, ಯಾರು ಶಿಕ್ಷಣ ಮತ್ತು ಧರ್ಮೋಪದೇಶವನ್ನು ಮಾಡತಕ್ಕವರಾಗಿದ್ದರೋ ಅಂಥ ಬ್ರಾಹ್ಮಣರು ತಮ್ಮ ಪ್ರಮುಖಾಂಗವಾದ ಧಾರ್ಮಿಕ ಉಪದೇಶಮಾವುದುದ. ಜೊತೆಗೆ ಭಿನ್ನಭಿನ್ನತರವಾದ ಉದ್ಯೋಗಗಳನ್ನು ಕೈಗೊಂಡಿದ್ದರು. ಆದರೆ ಅವರು ರಾಜನಿಗೆ ರಾಜ್ಯನಿಯಂತ್ರಣದ ವಿಷಯವಾಗಿ ಉಪದೇಶಮಾಡದೆ ಇರುತ್ತಿದ್ದಿಲ್ಲವೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರು. ಈ ತರದ ಕಾರ್ಯಶಾಖೆಯು ಅಂಥವರಿಂದಲೇ ತುಂಬಿಕೊಂಡಿತ್ತು. ಆದರೂ ಅವರು ಭಿನ್ನಭಿನ್ನ ಉದ್ಯಮಗಳಲ್ಲಿ ತೊಡಗಿ ಲಾಭಕರವಾದ ಉದ್ಯಮಗಳನ್ನು ನಡೆಸುವುದರಲ್ಲಿ ಕ್ರಮೇಣ ಕಾಲು ಚಾಚಿದ್ದರು. ಬ್ರಾಹ್ಮಣರ ಈ ತೆರನಾದ ಉದ್ಯಮಶೀಲಕ್ಕಾಗಿ ಬೇರೆ ಬೇರೆ ಪ್ರವಾಸಿಗಳು ಕೆಳಗಿನಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

"ಬಸಂಗವೆಂಬ ರಾಜ್ಯದಲ್ಲಿ ಇಲ್ಲಿಯಸ್ಥಾನಿಕವಾದ ಗುಂಪೊಂದಿದೆ. ಅವರಿಗೆ ಬ್ರಾಹ್ಮಣರೆನ್ನುತ್ತಾರೆ. ದಿನಾಲು ಅರಸರು ಈ ನೈಷ್ಠಿಕ ಬ್ರಹ್ಮಚಾರಿ ಬ್ರಾಹ್ಮಣರು ಹೇಳುವ ಪ್ರಮಾಣವನ್ನು ಕೇಳುತ್ತಾರೆ."[27] ಎಂದು ನ್ಯೂನಿಜನೂ, "ಈ ಬ್ರಾಹ್ಮಣರು ಸನ್ಯಾಸಿಗಳಂತೆ ತಮ್ಮೊಂದಿಗೆ ಇರುವರು, ಇವರು ಪವಿತ್ರರೆಂದು ಪರಿಗಣಿಸಲ್ಪಡುತ್ತಾರೆ. ಬ್ರಾಹ್ಮಣರ ಆಚಾರ್ಯರ ಮಟ್ಟಿಗೆ ಈ ಮಾತು ನಾನು ಹೇಳುತ್ತೇನೆ. ಇವರು ವಿದ್ವಾಂಸರು. ಅರಸನ ಆಶ್ರಯದಲ್ಲಿ ಅನೇಕ ಬ್ರಾಹ್ಮಣರಿದ್ದರು. ಮತ್ತು ಹಳ್ಳಿಪಳ್ಳಿಗಳಲ್ಲಿ, ಪಟ್ಟಣಗಳಲ್ಲಿ ಅಧಿಕಾರಿಗಳಾಗಿರುತ್ತಿದ್ದರು. ಸರಕಾರದ ಒಂದಿಲ್ಲೊಂದುತರದ ಅಧಿಕಾರ ಸ್ಥಾನವನ್ನು ಅಲಂಕರಿಸುತ್ತಿದ್ದರು. ಕೆಲವರು ವ್ಯಾಪಾರಿಗಳು; ಕೆಲವರು ತಮ್ಮ ಆಸ್ತಿಯಮೇಲೆ ಉಪಜೀವಿಸುವವರಾಗಿರುತ್ತಿದ್ದರು. ಈ ವೃತ್ತಿಗಳು ವಂಶಪಾರಂಪರ್ಯವಾಗಿ ನಡೆಯುತ್ತ ಬಂದವುಗಳಾಗಿರುತ್ತವೆ. ಗುಡಿಗಳ ಅಧಿಕಾರ ವಹಿಸಿಕೊಂಡಿರುವವರು ಪಂಡಿತರಾಗಿರುತ್ತಿದ್ದರು. ಅವರು ಸಾವು-ಬರುವಂಥದಾವುದನ್ನೂ ಸೇವಿಸುತ್ತಿದ್ದಿಲ್ಲ. ಮಾಂಸ, ಮೀನುಗಳನ್ನು ಮುಟ್ಟುತ್ತಿರಲಿಲ್ಲ. ಕೆಂಪಾಗಿ ಕಾಣುವಂತಹುದನ್ನೂ ಕೂಡ ಮುಟ್ಟುತ್ತಿರಲಿಲ್ಲ. ಅಂಥದು ರಕ್ತವೆಂದು ಅವರ ಕಲ್ಪನೆಯಾಗಿತ್ತು."[28] ಎಂದು ಪೇಜನೂ. "…. ಅರಸನೂ ದೊಡ್ಡ ದೊಡ್ಡ ಜಮೀನುದಾರರೂ, ಗೌರವ ಮನೆತನಸ್ಥರೂ ಇವರಿಗೆ ಮೇಲಿಂದ ಮೇಲೆ ದಾನವನ್ನೀಯುತ್ತಿದ್ದರು. ಅದರಿಂದ ಇವರು ಉಪಜೀವಿಸುತ್ತಿದ್ದರು. ಕೆಲವರಂತೂ ಸ್ಥಿತಿವಂತರಾಗಿರುತ್ತಿದ್ದರು. ಕೆಲವರು ಪೂಜೆನಡೆಯುವ ಸ್ಥಾನದಲ್ಲಿ ಪಂಡಿತರಾಗಿರುತ್ತಿದ್ದರು. ಅಂಥವುಗಳ ಆದಾಯವೂ ಚೆನ್ನಾಗಿತ್ತು."[29] ಎಂದು ಬಾರ್ಬೋಸನೂ ವರ್ಣಿಸಿದ್ದಾರೆ. ನ್ಯೂನಿಜನು ಬಣ್ಣಿಸುವುದೇನೆಂದರೆ "ವ್ಯಾಪಾರದಲ್ಲಿ ತೊಡಗಿದವರು ನಂಬಿಗಸ್ತರಾಗಿ ಬಹಳ ಬುದ್ಧಿವಂತರೂ, ಜಾಣಾಕ್ಷರೂ ಆಗಿರುವರು. ಮತ್ತು ಒಳ್ಳೆಯಲೆಕ್ಕಿಗರೂ ಆಗಿದ್ದರು; ಬಡಕಲು ಶರೀರವುಳ್ಳವರಾಗಿದ್ದರು, ಚೆನ್ನಾಗಿ ಆರೋಗ್ಯವಂತರಾಗಿಯೂ ಇದ್ದಾರೆ." ಎಂದು ಹೇಳುತ್ತಾನೆ.[30] ಜಾರ್ಜಹ್ಯೂಜೆ ವಾನ್‌ಲಿನ್ ಬೊಸ್ಟೆನ್‌ನು ಕ್ರಿ. ಶ. ೧೫೮೩ ರಲ್ಲಿ ಈ ರೀತಿ ಬಣ್ಣಿಸಿದ್ದಾನೆ. "ಅವರು ದೇವಸ್ಥಾನದ ಇಲ್ಲವೆ ಭೂತಪಿಶಾಚಿಗಳ ಮೂರ್ತಿಗಳ ಅರ್ಚಕರೂ, ಮಂತ್ರಿಗಳೂ ಆಗಿರುವರು… ಅವರು ಲೆಕ್ಕ ಪತ್ರ ಬರೆಯುವುದರಲ್ಲಿ ನಿಷ್ಣಾತರೂ ಆಗಿದ್ದುಕೊಂಡು ಅದರಿಂದ ತಮ್ಮ ಜೀವನ ನಿರ್ವಹಣ ಮಾಡಿಕೊಳ್ಳುತ್ತಿದ್ದರು. ಜನರ ಮೇಲೆ ಪ್ರಭಾವ ಬೀರುವವರೂ ಆಗಿದ್ದರು.[31] ವ್ಯಾಥ್‌ಫೋರ್ಬ್ಸ್‌ನೆಂಬಾತನು

27 ಸೊ. ಫೊ. ಲೈ ಇ. ದಿ ವಿ. ಎಂಪೈರ್. 1.I P. 123

28 ಎ ಫರಗಾಟನ್ ಎಂಪೈರ್ P. 245.

29 ಬಾರ್ಬೋಸಾ ಡ್ಯಾಮ್ಸ್ I P. 21.

30 ಸೋ. ಫೋ. ಲೈ. ಇ. ದಿ. ವಿಜಯನಗರ. ಎಂ. II P. 143.

31 Linschoten Purchase pilgrims X P. P. 255-56.

ಇದೇರೀತಿಯ ಅಭಿಪ್ರಾಯಪಟ್ಟಿದ್ದಾನೆ. "ಅವರು ನಿಷ್ಣಾತಲೆಕ್ಕಿಗರು. ಈ ಲೆಕ್ಕ ಪತ್ರ ಶಾಖೆಯಲ್ಲಿ ಬಹಳಷ್ಟು ಜನರು ಮುಸಲ್ಮಾನ ಆಡಳಿತಗಾರರಿಂದ ನೇಮಿಸಲ್ಪಟ್ಟಿದ್ದು ತಾಡವಾಲೆಗರಿಗಳ ಲೆಕ್ಕಪತ್ರಗಳನ್ನಿಡುವವರಾಗಿದ್ದರು." [32]

ಇದಲ್ಲದೆ ಬ್ರಾಹ್ಮಣರ ಜಾತಿಯಲ್ಲಿ ಅನೇಕರು ಶೂರರೂ ಸಹ ಆಗಿದ್ದರು. ಕ್ರಿ. ಶ ೧೧೨೮ರಲ್ಲಿ ಕೆಲವೊಂದು ಬ್ರಾಹ್ಮಣರು ಕ್ಷತ್ರಿಯರ ಆಚರಣೆಗಳನ್ನು ಮಾಡುತ್ತಿದ್ದರು. ಎಂಬುದು ಕಂಡುಬರುತ್ತದೆ. [33] ಪ್ರತಿಯೊಂದು ಜಾತಿಯಲ್ಲಿಯ ನಿರ್ದಿಷ್ಟಪಡಿಸಿದ ಜಾತಿಯ ಕಸುಬುಗಳು ಅಡಗುವ ಪರಿಸ್ಥಿತಿಯ ಕಾಲ ತಲೆದೋರಿದಾಗ ಕರ್ನಾಟಕದ ಬ್ರಾಹ್ಮಣರು ಕ್ರಮೇಣವಾಗಿ ಸೈನ್ಯವನ್ನೇ ಕಟ್ಟಿಕೊಂಡು ಅದರ ಅಧಿಕಾರಿಗಳಾಗಿಯೋ, ಅಥವಾ ಇನ್ನುಳಿದ ಜಾತಿಯವರಿಗೆ ಮೀಸಲಾಗಿದ್ದ ಅನೇಕ ಉದ್ಯೋಗಗಳನ್ನು ಕೈಗೊಂಡವರಾಗಿಯೋ ಇದ್ದರು. ಕ್ರಿ. ಶ. ೧೮೯೦ ರಲ್ಲಿ ಬ್ರಾಹ್ಮಣನಾದ ರವಿದಂಡನಾಯಕನು ಏಳುವಾಳವರನ್ನು ಜಯಿಸಿದನು ಎಂದ ಹೂ ವಿ ನ ಹಡಗಲಿಯ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. [34] ಕ್ರಿ. ಶ. ೧೩೬೮ ರಲ್ಲಿಯ ಒಂದು ಶಿಲಾಶಾಸನದಲ್ಲಿ ಮಾಧವನು "ಸಮುದ್ರ ತೀರದ ಅನೇಕ ದೇಶಗಳನ್ನು (ಪ್ರಾಂತಗಳನ್ನು) ಗೆದ್ದ ವೀರನಾಗಿದ್ದನು. [35] ಎಂದು ಬರೆಯಲ್ಪಟ್ಟಿದೆ. ಧರ್ಮದ ಉಚ್ಚಾಧಿಕಾರಿಗಳಾಗಿದ್ದ ಬ್ರಾಹ್ಮಣರೂ ಸಹ ಅರಸರೊಡನೆ ರಣಭೂಮಿಗೆ ತೆರಳಿದ ಉದಾಹರಣೆಗಳುಂಟು. ವ್ಯಾಸರಾಯರು ಸಾಳ್ವನರಸಿಂಹ ದೊರೆಯೊಡನೆ ರಣಭೂಮಿಗೆ ತೆರಳಿದ್ದನು. [36] ಅದರಂತೆಯೇ ಅಪಾಸ್ತಯ ತಿರುಕ್ಕವ ದೂರ ಎಂಬಾತನು ಕೃಷ್ಣದೇವರಾಯನೊಡನೆ ರಾಯಚೂರು ಸಂಗ್ರಾಮಕ್ಕೆ ತೆರಳಿದ್ದನು. ಮಾಧವರಾಯನು ಜಯಂತಿಯ ಆಡಳಿತಾಧಿಕಾರಿಯಾಗಿದ್ದುಕೊಂಡು ಕ್ರಿ. ಶ. ೧೩೯೧-೯೨ ರಲ್ಲಿ ಗೋವೆಯನ್ನು ಗೆದ್ದುಕೊಂಡನು. ಅರಗದ ರಾಜ್ಯಪಾಲನಾದ ವಿಠಲ ಒಡೆಯನು ಪಂಡಿತರಿಗೆ ದೊಡ್ಡ ಆಶ್ರಯದಾತನಾಗಿದ್ದನು. ಕ್ರಿ, ಶ. ೧೪೦೩ ರ ಒಂದು ಶಾಸನದಲ್ಲಿ ಅವನ ಬಗೆಗೆ ಹೀಗೆ ಹೇಳಲಾಗಿದೆ. ವಿದ್ಯೆಯಲ್ಲಿ ಪಾರಂಗತನೂ, ವಿದ್ವಜ್ಜನರಿಂದ ತುಂಬಿದ ಕಮಲಗಳುಳ್ಳ ಸರೋವರಕ್ಕೆ ಹಂಸ ಪಕ್ಷಿಯಂತೆಯೂ, ಚಕೋರವೆಂಬ ಕವಿಗಳ ಸಮೂಹಕ್ಕೆ ಚಂದ್ರನೋಪಾದಿಯಲ್ಲಿಯೂ ಇದ್ದನು. [37] ಇಷ್ಟೇ ಅಲ್ಲದೆ

---

32 ರಿಲೇಷನ್ಸ್ ಆಫ್ ಗೋಲ್ಕೊಂಡ ಫುಟ್‌ನೋಟ್ P. 14-65.

33 ಸೋ. ಪೊ. ಲೈ. ಇ. ವಿ ಎಂಪೈರ್ II P. 126.

34 128, of 1913. Rangachari to P List I By 183. P. P. 281-82

35 ಎ. ಕರ್ನಾಟಕಾ VII SK. 281. P. 146.

36 ಸೋಮನಾಥ, "ವ್ಯಾಸಯೋಗಿ ಚರಿತಂ" ಪ್ರಸ್ತಾವನೆ. P. XCI-XCV.

37 ಎ. ಕರ್ನಾಟಕ VI KP 52. PP 87-88.

ಅವನು ಶಾಸ್ತ್ರಕಲೆಗಳಲ್ಲಿ ಎತ್ತಿದಕೈ ಎನಿಸಿದ್ದನು. ಸಂಪತ್ತಿಗೂ ವಿದ್ವತ್ತಿಗೂ ಅವನು ಆಗರವಾಗಿದ್ದನು. [38]

ಒಂದನೆಯ ದೇವರಾಯನ ಕೈ ಕೆಳಗೆ ಇದ್ದಂಥ ಅಣ್ಣಮಾರಾಧ್ಯನು (ಕೆಂಪಲ್ಲಿ) ಚತುರ್ವೇದಗಳನ್ನು ಬಲ್ಲವನಾಗಿದ್ದನು. ಶೈವಗ್ರಂಥಗಳಿಂದ ಅವನ್ನು ಕಲಿತುಕೊಂಡು ಅರ್ಥವನ್ನೂ ಅರಿತವನಾಗಿದ್ದನು. ಅವನು ಶ್ರೀಶೈಲದ ಉತ್ತರ ಬಾಗಿಲಿನ ಅಧಿಕಾರಿಯಾಗಿದ್ದನು. [39] ಜಗತ್ತಿನಲ್ಲಿ ಹೆಸರುಗಳಿಸಿದವನಾಗಿದ್ದನು. ಅದರಂತೆ ಸಾಳುವ ತಿಮ್ಮನೂ ಅವನ ಅಣ್ಣನ ಮಗನಾದ ನಂದೆನಲ್ಲಾ ಗೋಪ ಮಂತ್ರಿಯೂ, ಕೊಂಡವೀಡಿನ ರಾಜ್ಯಪಾಲರಾಗಿದ್ದರು. [40]

ಮೇಲೆ ಕಾಣಿಸಿದ ಕೆಲವೇ ಉದಾಹರಣೆಗಳಿಂದ ಸ್ಪಷ್ಟವಾಗುವುದೇನೆಂದರೆ ಈ ಕಾಲದಲ್ಲಿ ಬ್ರಾಹ್ಮಣರು ಎಲ್ಲತರಹದ ಉದ್ಯೋಗಗಳನ್ನು ಕೈಕೊಂಡವರಾಗಿದ್ದರು.– ಡಾ॥ ಬಿ. ಎ. ಸಾಲತೊರೆ ಅವರು ಈ ಬಗೆಗೆ ಹೀಗೆ ಬರೆದಿದ್ದಾರೆ. –– " ಅರಸನ ಮಂತ್ರಿಯಾಗಿದ್ದುಕೊಂಡು ರಾಜ್ಯದ ಅವನತಿಗೂ, ಸುಸ್ಥಿತಿಗೂ ಅವನೇ ಹೊಣೆಗಾರನು. ಅವನು ಒಂದು ದೊಡ್ಡ ಸಭೆಯ ಸುಭೇದಾರನಾಗಿದ್ದುಕೊಂಡು ಅಲ್ಲಿಯ ರಾಜ್ಯದಾಡಳಿತವನ್ನು ಸಾಗಿಸುವನು. ರಾಜಭವನ ಅಥವಾ ಕುಟುಂಬಗಳಲ್ಲಿದ್ದ ಪ್ರಣಯ ಸಮಾಚಾರವನ್ನು ಹಾವೇರೀನ್ಯಾಯದಿಂದ [41] ಬಗೆಹರಿಸಬಲ್ಲವನಾಗಿದ್ದನು. ಅವನು ಶ್ರೀಮಂತಿಕೆಯು ಅಟ್ಟಹಾಸದಿಂದ ಮೆರೆಯುತ್ತಿದ್ದ ದೇಶದ ಸಾಂಪತ್ತಿಕ ಸ್ಥಿತಿಗತಿಗಳಿಗೆ ಪರಿಪೋಷಕನಾಗಿದ್ದನು. [42] ಮೇಲಿನ ಈ ಎಲ್ಲಾ ದೇಶಿಯರು ಪರದೇಶಿಯರು ಕೊಟ್ಟ ಉದಾಹರಣೆಗಳ ಮೇಲಿಂದ ಬ್ರಾಹ್ಮಣರು ತಮ್ಮ ಪೂರ್ವಜರಿಗೆ ಮೀಸಲಾಗಿದ್ದ ಧರ್ಮ ಹಾಗೂ ಶಿಕ್ಷಣಕಾರ್ಯಗಳನ್ನಷ್ಟೇ ಮಾಡಿಕೊಂಡಿರದೆ ತಮ್ಮ ಜಾತಿಯ ಕಟ್ಟು ಕಟ್ಟಳೆಗಳನ್ನು ಬಿಸಾಡಿ ಜೀವನದ ನಾನಾ ರಂಗಗಳಲ್ಲಿ ತರತರದ ಉದ್ಯಮಗಳಲ್ಲಿ ತೊಡಗಿದ್ದರೆಂಬ ಮಾತನ್ನು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. ಈ ಸುಮಾರಿಗೆ ಉಳಿದ ಜಾತಿ ಪಂಥದವರು ಬ್ರಾಹ್ಮಣರು ಮಾಡುತ್ತಿದ್ದ ಕೆಲಸಗಳನ್ನು ಮಾಡಲು ಮುಂದೆ ಬಂದರು. ಲಿಂಗಾಯತ, ಜೈನ, ಬೌದ್ಧ, ಮತ್ತು ಇನ್ನುಳಿದ ಜಾತಿಗಳಲ್ಲಿ ಶಿಕ್ಷಣ ತಜ್ಞರೂ, ಅವರವರ ಜಾತಿಯ ಶಿಕ್ಷಣಕೇಂದ್ರಗಳೂ ಅಸ್ತಿತ್ವದಲ್ಲಿದ್ದವು. ಆದ

---

38 ಇದೇ ಗ್ರಂಥ KP-53.

39 ನೆಲ್ಲೂರು ಇನ್‌ಸ್ಕ್ರಿಪ್ಷನ್ P. 16.

40 ಸೋ. ಪೋ. ಲೈ. ಇ. ದಿ. ವಿ. ಎಂಪೈರ್ P. 125.

41 ಹಾವೇರೀ ನ್ಯಾಯವೆಂದರೆ ಎರಡು ಪಕ್ಷದವರಿಗೂ ಸಮನಾಗಿ ನ್ಯಾಯತೀರಿಸುವ ಒಂದುವಿಧ; ಇದನ್ನು ರೂಢಿಯಲ್ಲಿ ಹಾವೇರೀನ್ಯಾಯ ಎಂದು ಹೇಳುವುದುಂಟು.

42 ಎ. ಫರಗಾಟೆನ್ ಎಂಪೈರ್ P. 131.

ಕಾರಣ ಕಾಲಕ್ಕೆ ಸರಿಯಾದ ಶೈಕ್ಷಣಿಕ ಹೊಣೆಗಾರಿಕೆಯು ಮೀಸಲಾಗಿದ್ದ ಬ್ರಾಹ್ಮಣರ ಕೈ ತಪ್ಪಿ ಇನ್ನುಳಿದ ಮತೀಯರ ಕೈಯಲ್ಲಿ ಸೇರಿತು.

## ಈ ಕಾಲದ ಸ್ತ್ರೀ ಶಿಕ್ಷಣದ ರೀತಿ ನೀತಿಗಳು.

ವಿಜಯನಗರರಾಯರ ಕಾಲದಲ್ಲಿ ಸ್ತ್ರೀಯರು ಬಹಳ ಮಟ್ಟಿಗೆ ಮುಂದುವರಿದಿದ್ದರು. ಎಂಬ ಮಾತು ಐತಿಹಾಸಿಕ ಸಂಗತಿಗಳ ಮೇಲಿಂದ ಸ್ಪಷ್ಟವಾಗಿ ಕಂಡು ಬರುವುದು. ಮಧ್ಯಯುಗೀನ ಕಾಲದಲ್ಲಿ ಸ್ತ್ರೀಯರಿಗೆ ಶಿಕ್ಷಣವು ಪುರುಷರಿಗೆ ಸರಿಸಮಾನವಾಗಿ ದೊರೆಯುತ್ತಿತ್ತು. ರಾಜ ಕೇಸರಿವರ್ಮಾ (ಒಂದನೆಯ ಆದಿತ್ಯ) ಎಂಬುವನ ಗಳನೆಯ ವಯಸ್ಸಿನಲ್ಲಿ ವಿದಳಾ ಅಥವಾ ಮಾದೇವಿಯು ಅರಂದಿಮಂಗಲ ಎಂಬಲ್ಲಿಯೇ ಜೈನ ಮಠದಲ್ಲಿ ೫೦೦ ಸ್ತ್ರೀ ವಿದ್ಯಾರ್ಥಿನಿಯರು ಇದ್ದರೆಂದು ಹೇಳಿದ್ದಾಳೆ.[43] ವಿಜಯನಗರ ರಾಜರ ಕಾಲದಲ್ಲಿ ಸ್ತ್ರೀ ಶಿಕ್ಷಣವು ಎಷ್ಟು ಶ್ರದ್ಧೆಯಿಂದ ಮುಂದುವರಿದಿತ್ತೆಂಬುದರ ಬಗೆಗೆ ನ್ಯೂನಿಜನೆಂಬ ಪರದೇಶಿಯ ಪರಿಣತನ ವರ್ಣನೆಯಿಂದ ತಿಳಿದು ಬರುತ್ತದೆ. "ಆ ಕಾಲದಲ್ಲಿ ಕುಸ್ತಿಯನ್ನಾಡಬಲ್ಲ ಹೆಂಗಸರೂ, ಜ್ಯೋತಿಷ್ಯ ಜ್ಞಾನವುಳ್ಳ ಹೆಂಗಸರೂ, ಮತ್ತು ಒಳ್ಳೆಯ ಶಕುನ ಇಲ್ಲವೆ ಕಣಿ ಹೇಳುವವರೂ ಇದ್ದರು ತಮ್ಮ ತಮ್ಮ ಮನೆಗಳಲ್ಲಿ ಗಳಿಕೆ ಬಳಕೆಯ ಲೆಕ್ಕವನ್ನಿಡಬಲ್ಲ ಸ್ತ್ರೀಯರೂ ಮತ್ತು ರಾಜ್ಯನಿಯಂತ್ರಣದ ಎಲ್ಲ ವರದಿಗಳನ್ನು ಬರೆದಿಡತಕ್ಕಂಥ ಸ್ತ್ರೀಯರೂ ಮತ್ತು ತಮ್ಮಲ್ಲಿಯ ಗ್ರಂಥಗಳನ್ನು ಬೇರೆಪ್ರಾಂತೀಯ ಗ್ರಂಥಗಳೊಡನೆ ತುಲನೆಮಾಡಿ ಪರಿಶೀಲಿಸುವಂತಹ ಕುಶಲೆಯರಾದ ಸ್ತ್ರೀಯರೂ ಇದ್ದರು. ಸಂಗೀತ ಹಾಗು ನೃತ್ಯವನ್ನು ಬಲ್ಲಂತಹ ಸ್ತ್ರೀಯರು ಆ ಕಾಲದಲ್ಲಿ ಇದ್ದರು. ರಾಜಕಾರಣದಲ್ಲಿಯೂ, ಕೆಲವರು ಸಂಗೀತಶಾಸ್ತ್ರದಲ್ಲಿಯೂ, ಪಾರಂಗತೆಯರಾಗಿದ್ದರು. ಅಲ್ಲದೆ ಸ್ತ್ರೀಯರು ನ್ಯಾಯಾಧೀಶರುಗಳಾಗಿಯೂ, ಬೇಲಿಫರುಗಳಾಗಿಯೂ ರಾತ್ರಿಯ ಕಾಲದಲ್ಲಿ ರಾಜಭವನವನ್ನು ಕಾಯುವ ರಕ್ಷಕರುಗಳಾಗಿಯೂ ಆಗಿರುತ್ತಿದ್ದರು.[44] ಆಗಿನಕಾಲದ ಸ್ತ್ರೀ ಸಾಹಿತಿಗಳಲ್ಲಿ ಪ್ರಸಿದ್ಧರಾದವರು ಗಂಗಾದೇವಿ, ತಿರುಮಲಾಂಬಾ, ರಾಮಭದ್ರಾಂಬಾ ಮುಂತಾದವರು ಮುಖ್ಯರು. ರಾಮಭದ್ರಾಂಬೆಯು ತನ್ನ ರಘುನಾಥ ಅಭ್ಯುದಯವೆಂಬ ಗ್ರಂಥದಲ್ಲಿ ತಂಜಾವರಿನ ರಘುನಾಥನಾಯಕನು ನೆರವೇರಿಸಿದ ವಿದ್ವಾಂಸರ ಸಭೆಯ ವರ್ಣನೆಯನ್ನು ಮಾಡಿದ್ದಾಳೆ

ಅವಳು ಈ ಸ್ತ್ರೀಯರ ವಿಷಯವಾಗಿ ಅನ್ನುವುದೇನೆಂದರೆ "ಸಭೆಯಲ್ಲಿನ ಸ್ತ್ರೀಯರು ನಾಲ್ಕುತರದ ಕವಿತೆಯನ್ನು ರಚಿಸಬಲ್ಲವರಾಗಿದ್ದರು. ಚಿತ್ರಬಂಧ, ಗರ್ಭ,

(3 ನೇ ರಕ್ಷಾಪುಟ ನೋಡಿ)

43 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ III. P. 225.

44 ಸೋ. ಪ್ರೊ. ಲೈ. ನಿ. ಎಂಪೈರ್ II P. 161 ಮತ್ತು ಎ. ಫರಗಾಟನ್ ಎಂಪೈರ್ P. 382-383.

(48 ನೇ ಪುಟದಿಂದ)
ಮತ್ತು ಆಶುರಚನೆಯಲ್ಲಿ ಬಲ್ಲವರಾಗಿದ್ದರು. ಅನೇಕತರದ ಭಾಷೆಯಶಬ್ದಗಳ ಅರ್ಥ ವನ್ನು ಹೇಳಬಲ್ಲವರಾಗಿದ್ದರು. ಸಲ್ಲೇಖಿನೀ ಕಲೆಯಲ್ಲಿ ನಿಪುಣರಾಗಿದ್ದರು. ಸಮಸ್ಯಾ ಪೂರ್ತಿ ( ಪದ್ಯ ಪೂರಣ ) ಯನ್ನು ಮಾಡುವುದರಲ್ಲಿ ಭಾಗವಹಿಸುತ್ತಿದ್ದರು. ಅವರು ಒಂದೇ ತಾಸಿನಲ್ಲಿ ಒಂದುನೂರು ಪದ್ಯಗಳನ್ನು ರಚಿಸುವ ಕಾವ್ಯಸ್ಫೂರ್ತಿ ಮತ್ತು ಪ್ರತಿಭಾಸಂಪನ್ನತೆಯುಳ್ಳವರಾಗಿದ್ದರು. ಸಂಸ್ಕೃತ, ತೆಲಗು ಮತ್ತ ಆರು ಪ್ರಾಕೃತ ಭಾಷೆಗಳಲ್ಲಿ ಹೀಗೆ ಅಷ್ಟಭಾಷೆಗಳಲ್ಲಿ ಕಾವ್ಯಪ್ರತಿಭಾಶಕ್ತಿಯನ್ನು ಸಂಪಾದಿಸಿದ್ದರು.

(ಮುಗಿಯಿತು)

LICENCED TO POST WITHOUT PRE PAYMENT LICENCE NO. 3
Registred with the Registrar of News papers for India under
No. 17139/69
Siddaganga Monthly Magazine Siddaganga Mutt.
Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.